ಗರಿಷ್ಠ 15 ಪ್ರಶಸ್ತಿಗಳನ್ನು ನೀಡಲಾಗುವುದು. ಅಂದರೆ, ಪ್ರತಿ ವ್ಯಕ್ತಿ/ಗುಂಪು/ಸಂಸ್ಥೆ ವಿಭಾಗದಲ್ಲಿ ಐದೈದು ಪ್ರಶಸ್ತಿಗಳನ್ನು ಮಾತ್ರ ಪ್ರತ್ಯೇಕವಾಗಿ ಒಳಗೊಂಡಿರುತ್ತದೆ ಮತ್ತು ಈ ಕೆಳಗಿನವುಗಳನ್ನು ಒಳಗೊಂಡಿರುತ್ತದೆ.

1. ಪ್ರಮಾಣ ಪತ್ರ
2. ನಗದು ಪ್ರಶಸ್ತಿ

ವೈಯಕ್ತಿಕ ವಿಭಾಗದಲ್ಲಿ, ಪ್ರಶಸ್ತಿ ಮೊತ್ತವು ರೂ. 1.00 ಲಕ್ಷಗಳಾಗಿರುತ್ತದೆ (ಒಂದು ಲಕ್ಷ ರೂಪಾಯಿಗಳು ಮಾತ್ರ) ಗುಂಪು ವಿಭಾಗದಲ್ಲಿ, ಪ್ರಶಸ್ತಿ ಮೊತ್ತವು, ಗುಂಪಿನ ಪ್ರತಿ ಸದಸ್ಯನಿಗೆ ಗರಿಷ್ಠ ರೂ. 1.00 ಲಕ್ಷಗಳ (ಒಂದು ಲಕ್ಷ ರೂಪಾಯಿಗಳು ಮಾತ್ರ) ಮಿತಿಗೊಳಪಟ್ಟು ರೂ. 5.00 ಲಕ್ಷಗಳಾಗಿರುತ್ತದೆ. (ಐದು ಲಕ್ಷ ರೂಪಾಯಿಗಳು ಮಾತ್ರ) (ಗುಂಪಿನಲ್ಲಿ 5 ಜನರಿಗಿಂತ ಹೆಚ್ಚು ಸದಸ್ಯರಿದ್ದಲ್ಲಿ, ಪ್ರಶಸ್ತಿ ಮೊತ್ತವು ಅವರುಗಳಲ್ಲಿ ಸಮನಾಗಿ ಹಂಚಿಕೆಯಾಗುತ್ತದೆ). ಸಂಸ್ಥೆ ವಿಭಾಗದಲ್ಲಿ ಪ್ರಶಸ್ತಿ ಮೊತ್ತವು ರೂ. 10.00 ಲಕ್ಷಗಳಾಗಿರುತ್ತದೆ (ಹತ್ತು ಲಕ್ಷ ರೂಪಾಯಿಗಳು ಮಾತ್ರ)

**ಅನುದಾನದ ಹಂಚಿಕೆ:**

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2070–00–800–0–15–059 ಆಡಳಿತ ಸುಧಾರಣೆ–ಸವಾಲು ನಿಧಿ– ಇತರೆ ಖರ್ಚು" ಅಡಿಯಲ್ಲಿ ಭರಿಸತಕ್ಕದ್ದು.

**ಪ್ರಶಸ್ತಿ ಪ್ರಧಾನ:**

ಸದರಿ ಪ್ರಶಸ್ತಿಗಳನ್ನು ಇದೇ ಉದ್ದೇಶಕ್ಕಾಗಿ ವಿಶೇಷವಾಗಿ ಆಯೋಜಿಸಲಾಗುವ ಕಾರ್ಯಕ್ರಮದಲ್ಲಿ ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಯವರಿಂದ ಪ್ರಧಾನ ಮಾಡಲಾಗುವುದು.

**ಪ್ರಶಸ್ತಿಗಾಗಿ ಇತರೆ ಸಾಮಾನ್ಯ ಪರತ್ತುಗಳು:**

1. ಪ್ರಶಸ್ತಿ ಪಡೆದವರು ಮುಂದಿನ ಅವನ/ಅವಳ ಸೇವಾವಧಿಯಲ್ಲಿ (ವೈಯಕ್ತಿಕ ವಿಭಾಗದಲ್ಲಿ) ಅವರ ವಿರುದ್ಧ ಶಿಸ್ತು ಕ್ರಮ ಕೈಗೊಂಡಲ್ಲಿ, ಸದರಿ ಪ್ರಶಸ್ತಿಯನ್ನು ಹಿಂಪಡೆಯುವ ಷರತ್ತಿಗೆ ಒಳಪಟ್ಟಿರುತ್ತದೆ. ಸಂಸ್ಥೆ ವಿಭಾಗದಲ್ಲಿ ಪ್ರಶಸ್ತಿ ಘೋಷಣೆಯ ನಂತರ, ಸದರಿ ಸಂಸ್ಥೆಯು ಕೇಂದ್ರ/ರಾಜ್ಯ ಸರ್ಕಾರದಿಂದ ಬ್ಲಾಕ್ ಲಿಸ್ಟ್‌ಗೆ ಒಳಪಟ್ಟಲ್ಲಿ, ಪ್ರಶಸ್ತಿಯನ್ನು ಹಿಂಪಡೆಯಲಾಗುವುದು;
2. ಸರ್ಕಾರವು ಪ್ರಶಸ್ತಿಯನ್ನು ಹಿಂಪಡೆಯಲು ಅಥವಾ ರದ್ದುಗೊಳಿಸಲು ಅಥವಾ ಪ್ರಶಸ್ತಿಯ ದಾಖಲೆ ಪುಸ್ತಕದಿಂದ ವೈಯಕ್ತಿಕ/ಗುಂಪು/ಸಂಸ್ಥೆ ವಿಭಾಗದ ಪ್ರಶಸ್ತಿ ಪಡೆದವರ ಹೆಸರನ್ನು ತೆಗೆದುಹಾಕುವ ಅಧಿಕಾರವನ್ನು ಹೊಂದಿರುತ್ತದೆ;
3. ಈ ಯೋಜನೆಯಡಿ ಪ್ರಶಸ್ತಿ ಘೋಷಣೆಯಾದ ವ್ಯಕ್ತಿ/ಗುಂಪು/ಸಂಸ್ಥೆಯು ಅನುಬಂಧ–1ರನ್ವಯ ಕರಾರು ಪತ್ರವನ್ನು ಮಾಡಿಕೊಳ್ಳತಕ್ಕದ್ದು. ಈ ಕರಾರು ಪತ್ರವು ಪ್ರಶಸ್ತಿ ಪಡೆದವರು ಪ್ರಶಸ್ತಿಯನ್ನು ಹಿಂದಿರುಗಿಸಲು ಅಥವಾ ವ್ಯಕ್ತಿ/ಗುಂಪು/ಸಂಸ್ಥೆಯ ಹೆಸರನ್ನು ಪ್ರಶಸ್ತಿ ದಾಖಲೆ ಪುಸ್ತಕದಿಂದ ತೆಗೆದು ಹಾಕುವ ಹಕ್ಕನ್ನು ಒಳಗೊಂಡಿರತಕ್ಕದ್ದು;
4. ಈ ಯೋಜನೆಯಡಿ ಪ್ರಶಸ್ತಿ ಪಡೆದ ವ್ಯಕ್ತಿ/ಗುಂಪು/ಸಂಸ್ಥೆಯು ಯಾವುದೇ ಸರ್ಕಾರ/ಮಂಡಳಿ/ಕಂಪನಿ/ಕಾರ್ಪೋರೇಷನ್/ಪ್ರಾಧಿಕಾರ/ಸ್ವಾಯತ್ತ ಸಂಸ್ಥೆಗಳು ಯಾವುದೇ ಯೋಜನೆಯಡಿ ಯಾವುದೇ ಬೇಡಿಕೆ, ವಿಶೇಷ ಪರಿಗಣನೆ, ಪರಿಹಾರ, ಪ್ರಾಮುಖ್ಯತೆ ಪಡೆಯಲು ಅರ್ಹತೆ ಹೊಂದಿರುವುದಿಲ್ಲ;
5. ಪ್ರಶಸ್ತಿಯನ್ನು ನೀಡಿದ/ಹಿಂಪಡೆದ ಬಗೆಗಿನ ವಿವರಗಳು ಅಥವಾ ಪುನರ್ ಪ್ರಧಾನ ಮಾಡಿದ ವಿವರಗಳನ್ನು ಕರ್ನಾಟಕ ಗೆಜೆಟ್‌ನಲ್ಲಿ ಪ್ರಕಟಿಸುವುದು;

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 270 ವೆಚ್ಚ–12/10, ದಿನಾಂಕ: 18–06–2010ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ..

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಅಬ್ದುಲ್ ರೆಹಮಾನ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಆಸು–ತರಬೇತಿ)

## ಅನುಬಂಧ–1

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 92 ಇಆಸು 2009, ದಿನಾಂಕ: 08–07–2010ಕ್ಕೆ**

**ಕರಾರು ಪತ್ರ**

ನಾನು ಶ್ರೀ..........................................................................................................ಚಾಲೆಂಜ್ ಫಂಡ್ ಯೋಜನೆಯಡಿ ಪ್ರಶಸ್ತಿ ಸ್ವೀಕರಿಸಿದ್ದು, ಈ ಮೂಲಕ ಘೋಷಿಸುವುದೇನೆಂದರೆ, ಈ ಪ್ರಶಸ್ತಿಗೆ ಸಂಬಂಧಪಟ್ಟ ನಿಬಂಧನೆ ಮತ್ತು ಷರತ್ತುಗಳನ್ನು ನಾನು/ನಾವು ಓದಿರುತ್ತೇನೆ/ವೆ ಮತ್ತು ಅರ್ಥೈಸಿಕೊಂಡಿರುತ್ತೇನೆ/ವೆ. ಈ ಪ್ರಶಸ್ತಿಯನ್ನು ವಾಪಸ್ಸು ಪಡೆದಲ್ಲಿ ಮತ್ತು ನನ್ನ ಹೆಸರನ್ನು ಪ್ರಶಸ್ತಿ ದಾಖಲೆ ಪುಸ್ತಕದಿಂದ ತೆಗೆದುಹಾಕಿದಲ್ಲಿ ಅಥವಾ ರದ್ದುಗೊಳಿಸಿದಲ್ಲಿ ನನ್ನಿಂದ/ನಮ್ಮ ಗುಂಪಿನಿಂದ/ನಮ್ಮ ಸಂಸ್ಥೆಯಿಂದ ಪಡೆದ/ಸ್ವೀಕರಿಸಿದ ಪ್ರಶಸ್ತಿಯನ್ನು ಸರ್ಕಾರಕ್ಕೆ ಹಿಂದಿರುಗಿಸುತ್ತೇನೆ/ವೆಂದು ಈ ಮೂಲಕ ಘೋಷಿಸುತ್ತೇನೆ/ವೆ.

ದಿನಾಂಕ: ಪ್ರಶಸ್ತಿ ಸ್ವೀಕರಿಸಿದವರ ಸಹಿ

ಸಾಕ್ಷಿಗಳು:

1)

2)

**ಅನುಬಂಧ–2**

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 92 ಇಆಸು 2009, ದಿನಾಂಕ: 08–07–2010ಕ್ಕೆ**

1. ಪ್ರಸ್ತಾವನೆಯ ರಚನೆ ಸಂಕ್ಷಿಪ್ತವಾಗಿರಬೇಕು.
2. ಕಂಡಿಕೆ (2)ರಲ್ಲಿನ ಉದ್ದೇಶವನ್ನು ಪ್ರಸ್ತಾವನೆಯ ಮಾರ್ಗಸೂಚಿಗಳು ಹೊಂದಿರತಕ್ಕದ್ದು;
3. ಪ್ರಸ್ತಾವನೆಯು ಯಾವ ರೀತಿಯಲ್ಲಿ ಮಾರಾಟದ ಉದ್ದೇಶವಿಲ್ಲದ್ದು?
4. ಯೋಜನೆಗೆ ತಕ್ಕಂತೆ ಕಾರ್ಯನಿರ್ವಹಣೆಯಲ್ಲಿ ಸಾಧಿಸಿದ ಅಭಿವೃದ್ಧಿಯ ಅಂಶಗಳನ್ನು ಅಳೆಯುವ ಮಾನದಂಡಗಳೇನು?
5. ಪ್ರಸ್ತಾವನೆಯ ಉನ್ನತೀಕರಣದ ವಿಧಾನಗಳನ್ನು ತಿಳಿಸುವುದು;
6. ಕೆಟಿಪಿಪಿ ಆಕ್ಟ್ ಅಡಿ ವಿನಾಯಿತಿ ನೀಡುವ ಅಗತ್ಯವಿದೆಯೇ ಅಥವಾ ಇಲ್ಲವೇ? ಅಗತ್ಯವಿದ್ದಲ್ಲಿ ಕಾರಣಗಳನ್ನು ನೀಡುವುದು.
7. ಪ್ರಸ್ತಾವನೆಯನ್ನು ಮೂರನೆಯವರಿಂದ ಮೌಲ್ಯಮಾಪನ ಮಾಡಿಸಲು ಇರುವ ವ್ಯವಸ್ಥೆಗಳು;
8. ಪ್ರಸ್ತಾವನೆಯ ವೆಚ್ಚ;
9. ಅನುಷ್ಠಾನಕ್ಕಾಗಿ ಆಡಳಿತಾತ್ಮಕ ರಚನೆ (ಪೈಲಟ್ ಪ್ರಾಜೆಕ್ಟ್ ಆಗಿರುವುದರಿಂದ ಸಿಬ್ಬಂದಿಯ ಸೃಜನೆಯನ್ನು ನಿರೀಕ್ಷಿಸಿರುವುದಿಲ್ಲ);
10. ಪ್ರಾಜೆಕ್ಟ್‌ಗಳ ಅನುಷ್ಠಾನವು ಸಂಬಂಧಿಸಿದ ಸರ್ಕಾರದ ಇಲಾಖೆಗಳು/ಸರ್ಕಾರದ ಏಜೆನ್ಸಿಗಳ ಮುಖಾಂತರ ನಡೆಯತಕ್ಕದ್ದು;

(ಅಬ್ದುಲ್ ರೆಹಮಾನ್)
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಆಸು–ತರಬೇತಿ)

ಪಿ.ಆರ್. 1853

## INFRASTRUCTURE DEVELOPMENT SECRETARIAT

Sub: Release of funds for the Development of new airport at Bellary.

Read:
1. G.O. No. IDD 120 DIA 2008 dated 6-10-2008.
2. G.O. No. IDD 120 DIA 2008 dated 25-10-2008.
3. G.O. No. IDD 120 DIA 2008 dated 29-08-2009.
4. G.O. No. IDD FD 483 BRS 2009 dated 30-03-2010.
5. G.O. No. IDD 120 DIA 2008 dated: 30-03-2010.
6. Letter No. KIADB/PÉÃA.PÀ/¨sÀÆ¸Áé/2003/3451/dated 01-06-2010.

**Preamble:**

In G.O dated 6.10.2008 read at Sl. No. (1) above sanction was accorded for establishment of a new airport at Bellary through Public Private Partnership (PPP) on BoT basis on certain terms and conditions.

2. Airport Authority of India (AAI) was requested to conduct site visit and to assess feasibility for development of new airport at Bellary. AAI has conducted the feasibility study for this airport. In G.O. dated 25-10-2008 read at Sl. No. (2) above an amount of Rs. 3,42,151/- was released to AAI being the consultancy fees for feasibility study.

3. In G.O dated 29.08-2009 read at Sl.No. (3) above, an amount of Rs. 12.00 crores has been released to the CEO, KIADB for the payment of 40% of the cost of acquiring 900 acres (700 + 200) of land for the development of the new Bellary airport.

4. In G.O. read at Sl.No.(5) above, Finance Department had accorded sanction for the re-appropriation of a sum of Rs. 5163.20 lakhs under the major Head of Account 5465 capital outlay on general financial and trading institutions during 2009-10 for the development of Hubli airport and Bellary airports. Accordingly an amount of Rs. 35.00 crores was released through reappropriation for payment of compensation to the land owners for the land notified for Bellary Airport.

5. In letter dated 01-06-2010 the C.E.O. & E.M, KIADB has sent proposal for release of Rs. 74,93,81,100-00 for payment of compensation to the land owners of land notified for Bellary Airport.

6. The proposal of KIADB for release of funds has been examined and hence the following order.

**Government Order No.: IDD 120 DIA 2008, Bangalore Dated: 12-07-2010**

The Government after careful examination of the proposal here by accords sanction for release of an amount of Rs. 3500.00 lakhs (Rupees Three Thousand Five Hundred lakhs) only to the CEO, KIADB, Bangalore towards the payment of compensation for the land being acquired for the Bellary airport.

2. The expenditure of Rs. 3500.00 lakhs shall be met from the funds available under the Head of Account “5465-01-190-1-05-133 SDP Development of Minor Airports Special Development Plan during the year 2010-11.

3. The Chief Executive Officer, & Executive Member, KIADB, Bangalore is authorized to draw the above amount of Rs. 3500.00 lakhs on a payees receipt duly counter signed by the Under Secretary to Government, Infrastructure Development Department, Bangalore.

4. This order is issued with the Finance Department's concurrence vide Endorsement No. FD 1061 Exp-1/2010 dated 09-07-2010.

By Order and in the name of the Governor of Karnataka
**K.S. VENUGOPAL**
Under Secretary to Government (I/C)
Infrastructure Development Department

P.R. No. 1854

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಮಾನ್ಯ ಶಾಸಕರುಗಳ ಆಪ್ತ ಸಹಾಯಕರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 9 ಶಿಸನೇ 96, ದಿನಾಂಕ: 28–11–96.
2) ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 90 ಶಿಸನೇ 96, ದಿನಾಂಕ: 16–12–96
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 180 ಶಿಸನೇ 99, ದಿನಾಂಕ: 01–02–2000.
4) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 92 ಶಿಸನೇ 2000, ದಿನಾಂಕ: 16–08–2000.
5) ಅಧಿಸೂಚನೆ ಸಂಖ್ಯೆ: ಸಿಆಸುಇ 48 ಎಸ್‌ಆರ್‌ಆರ್ 2009, ದಿನಾಂಕ: 20–01–2010.
6) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 177 ಆಹಿಸೇ 2009, ದಿನಾಂಕ: 23–02–2010.
7) ಜಿಲ್ಲಾಧಿಕಾರಿಗಳು ಯಾದಗಿರಿ ಜಿಲ್ಲೆ ಇವರ ಪತ್ರ ಸಂಖ್ಯೆ: ಕಂ/ಸಿಬ್ಬಂದಿ–1/4 2010–11 ದಿನಾಂಕ: 07–04–2010.

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (2)ರ ಅಧಿಕೃತ ಜ್ಞಾಪನಗಳಲ್ಲಿ ಮಾನ್ಯ ಶಾಸಕರ ಆಪ್ತ ಸಹಾಯಕರನ್ನು ಒದಗಿಸುವ ಬಗ್ಗೆ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಸೂಚನೆ ನೀಡಲಾಗಿದೆ. ಮೇಲೆ ಓದಲಾದ (3)ರ ಆದೇಶದಲ್ಲಿ ಮೇಲೆ ಓದಲಾಗಿರುವ (1) ಮತ್ತು (2)ರ ಅಧಿಕೃತ ಜ್ಞಾಪನಗಳನ್ನು ಬಾಗಶಃ ಮಾರ್ಪಡಿಸಿ ರಾಜ್ಯ ಸರ್ಕಾರದ ಯಾವುದೆ ಇಲಾಖೆಗಳಲ್ಲಿನ ಗ್ರೂಪ್ ಸಿ ವೃಂದದ ನೌಕರರನ್ನು ಮಾನ್ಯ ಶಾಸಕರ ಆಪ್ತ ಸಹಾಯಕರಾಗಿ ನೇಮಿಸಲು ಅವಕಾಶ ಕಲ್ಪಿಸಲಾಗಿದೆ. ಮೇಲೆ ಓದಲಾದ (4)ರ ಆದೇಶದಲ್ಲಿ ನಿಗಮ: ಮಂಡಳಿ: ಸ್ಥಳೀಯ ಸಂಸ್ಥೆಗಳು: ಸ್ವಾಯತ್ತ: ಶಾಸನಬದ್ಧ ಸಂಸ್ಥೆಗಳ ಗ್ರೂಪ್ ಸಿ ವೃಂದದ ನೌಕರರನ್ನು ಷರತ್ತಿಗೊಳಪಟ್ಟು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಲು ಅವಕಾಶ ನೀಡಿದೆ. ಮೇಲೆ (5)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 15ರನ್ವಯ ಮಾನ್ಯ ವಿಧಾನ ಸಭಾ ಮತ್ತು ವಿಧಾನ ಪರಿಷತ್ ಸದಸ್ಯರುಗಳ ಆಪ್ತ ಸಹಾಯಕರನ್ನು ಗುತ್ತಿಗೆ ಆಧಾರದ ಮೇಲೆ ನೇಮಿಸಲು ಅವಕಾಶ ಕಲ್ಪಿಸಲಾಗಿದೆ. ಮೇಲೆ (6)ರಲ್ಲಿ ಓದಲಾದ ಆದೇಶದಲ್ಲಿ ಗ್ರೂಪ್ ಸಿ ವೃಂದದಲ್ಲಿ ಪ್ರಥಮ ದರ್ಜೆ ಸಹಾಯಕರ/ದ್ವಿತೀಯ ದರ್ಜೆ ಸಹಾಯಕರ/ಶೀಘ್ರಲಿಪಿಗಾರರಿಗೆ ನಿಗಧಿಪಸಿರುವ ವಿದ್ಯಾರ್ಹತೆಯನ್ನು ಹೊಂದಿರುವ ಅಭ್ಯರ್ಥಿಗಳನ್ನು ಮಾತ್ರ ಅವರ ವಿದ್ಯಾರ್ಹತೆಯನುಸಾರ ಕಂದಾಯ ಇಲಾಖೆಯಲ್ಲಿ ಮಂಜೂರಾಗಿರುವ ಪ್ರಥಮ ದರ್ಜೆ ಸಹಾಯಕರ/ದ್ವಿತೀಯ ದರ್ಜೆ ಸಹಾಯಕರ/ಶೀಘ್ರಲಿಪಿಗಾರರ ಹುದ್ದೆಗಳಿಗೆದುರಾಗಿ ಗುತ್ತಿಗೆ ಆಧಾರದ ಮೇಲೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 15(1)(ಬಿ)(ಗಿಖಖ)ರನ್ವಯ ಮಾನ್ಯ ಶಾಸಕರ ಆಪ್ತ ಸಹಾಯಕರಾಗಿ ಸರ್ಕಾರದಿಂದ ಅನುಮೋದಸಲ್ಪಟ್ಟ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ನೇಮಿಸಲು ಅವಕಾಶ ನೀಡಿದೆ. ಮೇಲೆ (7)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಯಾದಗಿರಿ ಜಿಲ್ಲೆ ಇವರು ಮಾನ್ಯ ಶಾಸಕರು ಯಾದಗಿರಿ ವಿಧಾನಸಭಾ ಕ್ಷೇತ್ರ ಇವರು ಗುತ್ತಿಗೆ ಆಧಾರದ ಮೇಲೆ ತಮ್ಮ ಆಪ್ತ ಸಹಾಯಕರನ್ನು ನೇಮಿಸಲು ಕೋರಿದ್ದು, ಸದರಿಯವರ ವಿದ್ಯಾರ್ಹತೆಯು ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ಸಮಾನವಾಗಿದ್ದು ಕಂದಾಯ ಇಲಾಖೆಯಲ್ಲಿ ಖಾಲಿ ಹುದ್ದೆಗಳು ಲಭ್ಯವಿಲ್ಲವೆಂದು ತಿಳಿಸಿ ಈ ಬಗ್ಗೆ ಸ್ಪಷ್ಟೀಕರಣ ಕೋರಿರುತ್ತಾರೆ. ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 131 ಆಹಿಸೇ 2010 ಬೆಂಗಳೂರು, ದಿನಾಂಕ : 20–05–2010**

ಸೂಕ್ತ ಪರಿಶೀಲನೆಯ ಯಾದಗಿರಿ ಜಿಲ್ಲಾ ಕಛೇರಿಯನ್ನಾಗಿ ಉನ್ನತೀಕರಿಸಲಾಗಿದ್ದು. ಯಾದಗಿರಿ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಖಾಲಿ ಹುದ್ದೆಗಳು ಲಭ್ಯವಿಲ್ಲದಿರುವ ಕಾರಣ ಎರಡು ಸಂಖ್ಯಾತಿರಿಕ್ತ ದ್ವಿತೀಯ ದರ್ಜೆ ಸಹಾಯಕ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಅಥವಾ ಯಾದಗಿರಿ ಜಿಲ್ಲೆಯ ಕಂದಾಯ ಇಲಾಖೆಯಲ್ಲಿ ವಯೋ ನಿವೃತ್ತಿ ಅಥವಾ ಇನ್ನಿತರೆ ಕಾರಣಗಳಿಂದ ಎರಡು ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳು ಖಾಲಿಯಾಗುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 609 ಸೇವೆಗಳು–1/2010 ದಿನಾಂಕ 30–04–2010ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ರುಕ್ಮಿಣಿ ದಿವಾಕರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಆಡಳಿತ–1)

ಪಿ.ಆರ್. 1855

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ :** 2010–11ನೇ ಸಾಲಿನಲ್ಲಿ ಇಲಾಖೆಯ ಅಂಗ ಸಂಸ್ಥೆಗಳ ಕಾರ್ಯಚಟುವಟಿಕೆ ಮತ್ತು ಆಡಳಿತ ನಿರ್ವಹಣೆಗಾಗಿ ಎರಡನೇ ಕಂತಿನ ಅನುದಾನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ: ಐಯಇ 50 ವಿತ್ರಮ 2010, ದಿನಾಂಕ: 13–04–2010.
2) ಸದಸ್ಯ–ಕಾರ್ಯದರ್ಶಿ, ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿ, ಬೆಂಗಳೂರು. ಇವರ ಪತ್ರ ಸಂಖ್ಯೆ: ಕ.ವಿ.ತಂ.ಅ/ಅ.ಬಿ./7/2010–11/203, ದಿನಾಂಕ: 16–04–2010.
3) ಕಾರ್ಯನಿರ್ವಾಹಕ ಕಾರ್ಯದರ್ಶಿ (ಪ್ರ) ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿ, ಬೆಂಗಳೂರು, ಇವರ ಪತ್ರ ಸಂ.: 3.1/ಗ್ರಾಂಟ್ಸ್/ಜಿಒಕೆ/63, ದಿ: 22–04–2010.
4) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಬೆಂಗಳೂರು. ಇವರ ಪತ್ರ ಸಂಖ್ಯೆ: ಕರಾವಿಪ 1.15/ಡಿಎಸ್‌ಟಿ/10–11/6180, ದಿ. 20–04–2010.
5) ಆಡಳಿತಗಾರರು, ಜವಹರ್‌ಲಾಲ್ ನೆಹರು ತಾರಾಲಯ, ಬೆಂಗಳೂರು. ಇವರ ಪತ್ರ ಸಂಖ್ಯೆ: ಡಿಪಿ/ಇಎಸ್‌ಟಿ/167/2010–11, ದಿನಾಂಕ: 16–07–2010.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿನ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು ಮುಂದುವರಿಸಿ, 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3425–60–200–0––01(101)(ಯೋ) ವೈಜ್ಞಾನಿಕ ಸಂಸ್ಥೆಗಳಿಗೆ ಸಹಾಯಾನುದಾನವಾಗಿ ಒಟ್ಟು ರೂ. 340.00 ಲಕ್ಷಗಳ ಅನುದಾನವನ್ನು ಕಲ್ಪಿಸಲಾಗಿದೆ. ಇದರ ಪೈಕಿ ಮೇಲೆ ಓದಲಾದ (2)ರಲ್ಲಿನ ಆದೇಶದಲ್ಲಿ ರೂ. 148.00 ಲಕ್ಷಗಳ ಅನುದಾನವನ್ನು ಮೊದಲನೇ ಹಾಗೂ 2ನೇ ಕಂತಾಗಿ 4 ಸಂಸ್ಥೆಗಳಿಗೆ ಈಗಾಗಲೇ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (2)ರಲ್ಲಿನ ಪತ್ರದಲ್ಲಿ ಸದಸ್ಯ–ಕಾರ್ಯದರ್ಶಿ, ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿ, ಬೆಂಗಳೂರು. ಇವರು 2010–11ನೇ ಸಾಲಿನಲ್ಲಿ ಅಕಾಡೆಮಿಯ ಕಾರ್ಯಚಟುವಟಿಕೆ ಮತ್ತು ಆಡಳಿತ ನಿರ್ವಹಣೆಗಾಗಿ ಎರಡನೇ ಕಂತಿಗೆ ಪ್ರಸ್ತಾವನೆ ಸಲ್ಲಿಸಿ ಸಹಾಯಾನುದಾನ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (3)ರಲ್ಲಿನ ಪತ್ರದಲ್ಲಿ ಕಾರ್ಯನಿರ್ವಾಹಕ ಕಾರ್ಯದರ್ಶಿ. ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿ, ಬೆಂಗಳೂರು. ಇವರು 2010–11ನೇ ಸಾಲಿನಲ್ಲಿ ಕೇಂದ್ರದ ಕಾರ್ಯಚಟುವಟಿಕೆ ಮತ್ತು ಆಡಳಿತ ನಿರ್ವಹಣೆಗಾಗಿ ಎರಡನೇ ಕಂತಿಗೆ ಪ್ರಸ್ತಾವನೆ ಸಲ್ಲಿಸಿ ಸಹಾಯಾನುದಾನ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (4)ರಲ್ಲಿನ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಬೆಂಗಳೂರು. ಈ ಸಂಸ್ಥೆಯೂ ಸಹ 2010–11ನೇ ಸಾಲಿನಲ್ಲಿ ಹಮ್ಮಿಕೊಂಡಿರುವ ವೈಜ್ಞಾನಿಕ ಕಾರ್ಯಚಟುವಟಿಕೆ ಮತ್ತು ಆಡಳಿತ ನಿರ್ವಹಣೆಗಾಗಿ ಎರಡನೇ ಕಂತಿಗೆ ಪ್ರಸ್ತಾವನೆ ಸಲ್ಲಿಸಿ ಸಹಾಯಾನುದಾನ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (5)ರಲ್ಲಿನ ಪತ್ರದಲ್ಲಿ ನಿರ್ದೇಶಕರು, ಜವಾಹರ್‌ಲಾಲ್ ನೆಹರು ತಾರಾಲಯ, ಇವರು 2010–11ನೇ ಸಾಲಿನಲ್ಲಿ ತಾರಾಲಯದ ಕಾರ್ಯಚಟುವಟಿಕೆ ಮತ್ತು ಆಡಳಿತ ನಿರ್ವಹಣೆಗಾಗಿ ಎರಡನೇ ಕಂತಿಗೆ ಪ್ರಸ್ತಾವನೆ ಸಲ್ಲಿಸಿ ಸಹಾಯಾನುದಾನ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಗಳನ್ನು ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಐಯಇ 61 ವಿತ್ರಮ 2010 ಬೆಂಗಳೂರು, ದಿನಾಂಕ : 19–07–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ವೈಜ್ಞಾನಿಕ ಸಂಸ್ಥೆಗಳಿಗೆ ಸಹಾಯಾನುದಾನವಾಗಿ ಕಾಯ್ದಿರಿಸಲಾದ ರೂ. 340.00 ಲಕ್ಷಗಳಲ್ಲಿ ಪ್ರಸಕ್ತ ಆರ್ಥಿಕ ಸಾಲಿನಲ್ಲಿ ಕೆಳಕಂಡ 4 ಸಂಸ್ಥೆಗಳು ಹಮ್ಮಿಕೊಂಡಿರುವ ಕಾರ್ಯಚಟುವಟಿಕೆ ಮತ್ತು ಆಡಳಿತ ನಿರ್ವಹಣೆಗಾಗಿ ಎರಡನೇ ಕಂತಿನ ಅನುದಾನವಾಗಿ ಲೆಕ್ಕ ಶೀರ್ಷಿಕೆ 3425–60–200–0–01(101) (ಯೋ) ಇದರಡಿಯಲ್ಲಿ ಒಟ್ಟಾರೆ ರೂ. 54.50 ಲಕ್ಷ (ರೂಪಾಯಿ ಐವತ್ತನಾಲ್ಕು ಲಕ್ಷ ಐವತ್ತು ಸಾವಿರ ಮಾತ್ರ)ಗಳನ್ನು ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಮಂಜೂರು ಮಾಡಿದೆ.

ರೂ. ಲಕ್ಷಗಳಲ್ಲಿ

| | | |
|---|---|---|
| 1 | ಸದಸ್ಯ–ಕಾರ್ಯದರ್ಶಿ,<br>ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿ, ಬೆಂಗಳೂರು | 12.50 |
| 2 | ನಿರ್ದೇಶಕರು, ಜವಹರ್‌ಲಾಲ್ ನೆಹರು ತಾರಾಲಯ, ಬೆಂಗಳೂರು | 15.00 |
| 3 | ಗೌರವ ಕಾರ್ಯದರ್ಶಿ<br>ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿ, ಬೆಂಗಳೂರು | 14.00 |
| 4 | ಗೌರವ ಕಾರ್ಯದರ್ಶಿ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಬೆಂಗಳೂರು | 13.00 |
| | **ಒಟ್ಟು** | **54.50** |

1. ಈ ಹಣವನ್ನು 2010–11ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 3425–60–200–0–01(101 (ಯೋ) ವೈಜ್ಞಾನಿಕ ಸಂಸ್ಥೆಗಳಿಗೆ ಸಹಾಯಾನುದಾನ ಇದರಡಿಯಲ್ಲಿ ಭರಿಸತಕ್ಕದ್ದು.
2. ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಮೇಲಿನ ಸಂಸ್ಥೆಗಳು ಸ್ವೀಕೃತ ರಶೀದಿಯಲ್ಲಿ ಹಣವನ್ನು ಸರ್ಕಾರದ ಅಧೀನ ಕಾರ್ಯದರ್ಶಿಯವರ ಮೇಲು ರುಜುವಿನೊಂದಿಗೆ ಹಣ ಸೆಳೆಯಬಹುದು.

3. ಈಗ ಬಿಡುಗಡೆ ಮಾಡಿದ ಹಣವನ್ನು ಅದೇ ಉದ್ದೇಶಕ್ಕೆ ಉಪಯೋಗಿಸತಕ್ಕದ್ದು ಮತ್ತು ಸಂಪೂರ್ಣವಾಗಿ ಉಪಯೋಗ ಮಾಡಿದ ಬಗ್ಗೆ ಪ್ರಮಾಣ ಪತ್ರ ಹಾಗೂ ಆಡಿಟ್ ಆದ ಲೆಕ್ಕ ಪತ್ರಗಳನ್ನು ದೃಢೀಕರಣದೊಂದಿಗೆ ದಿನಾಂಕ 30-05-2011ರ ಒಳಗೆ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
4. ಈಗ ಬಿಡುಗಡೆ ಮಾಡಿದ ಹಣವನ್ನು ಉದ್ದೇಶಿತ ಯೋಜನೆಗೆ ಮಾತ್ರ ಉಪಯೋಗಿಸತಕ್ಕದ್ದು, ಹಾಗೂ ಈ ಹಣವನ್ನು ಬೇರೆ ಯೋಜನೆಗೆ ಸರ್ಕಾರದ ಪೂರ್ವಾನುಮತಿ ಇಲ್ಲದೆ ವರ್ಗಾಯಿಸಬಾರದು.
5. ಉದ್ದೇಶಿತ ಕಾರ್ಯಕ್ರಮಕ್ಕೆ ಖರ್ಚಾಗದ ಬಾಬ್ತು ಅನುದಾನವನ್ನು ಉಳಿಸಿಕೊಂಡು ಅದನ್ನು ಸರ್ಕಾರದ ಗಮನಕ್ಕೆ ತರದಿದ್ದಲ್ಲಿ ಸದರಿ ಮೊತ್ತಕ್ಕೆ ಶೇ. 6ರಂತೆ ಬಡ್ಡಿಯೊಂದಿಗೆ ಸರ್ಕಾರಕ್ಕೆ ಪಾವತಿಸತಕ್ಕದ್ದು;
6. ಅನುದಾನವನ್ನು ಬಳಸದೇ ಬ್ಯಾಂಕಿನಲ್ಲಿ ಠೇವಣಿ ಮಾಡಿದ ಪಕ್ಷದಲ್ಲಿ ಅದನ್ನು ಸರ್ಕಾರದ ಗಮನಕ್ಕೆ ತರತಕ್ಕದ್ದು ಇಲ್ಲವಾದಲ್ಲಿ ಅಂತಹ ಠೇವಣಿ ಮೊತ್ತಕ್ಕೆ ದೊರೆಯುವ ಬಡ್ಡಿಯನ್ನು ಸಂಸ್ಥೆಗೆ ಆದಾಯವೆಂದು ಪರಿಗಣಿಸಿ, ಮುಂದೆ ಅನುದಾನ ಬಿಡುಗಡೆ ಸಂದರ್ಭದಲ್ಲಿ ಸದರಿ ಮೊತ್ತವನ್ನು ಕಡಿತಗೊಳಿಸಲಾಗುವುದು.
7. ಉದ್ದೇಶಿತ ಕಾರ್ಯಕ್ರಮದಲ್ಲಿ ಬಿಡುಗಡೆ ಮಾಡಲಾದಂತಹ ಅನುದಾನದ ಲೆಕ್ಕಪತ್ರಗಳನ್ನು ಮಂಜೂರು ಮಾಡುವ ಅಧಿಕಾರಿಯು ಸಮೀಕ್ಷೆಗಾಗಿ ಕೋರಿದ್ದಲ್ಲಿ ತಪ್ಪದೇ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 2008, ದಿನಾಂಕ: 16-05-2008ರಡಿ ಇಲಾಖಾ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 1856

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಲ್. ಬಾಬುರೆಡ್ಡಿ, ಪಿ.ಎಸ್.ಐ. ಬೆಸ್ಕಾಂ ಜಾಗೃತ ದಳ ಪೊಲೀಸ್ ಠಾಣೆ, ಕೋಲಾರ (ಹಾಲಿ ನಿವೃತ್ತ) ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೋಲಾರ ಜಿಲ್ಲೆ, ಕೋಲಾರ, ಇವರ ಆದೇಶ ಸಂಖ್ಯೆ: ಪನ್ನಿ/62-05 ಓಬಿ: 391/06-07 ದಿನಾಂಕ: 17-3-2006.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು 9/2006-07 ಓಬಿ: 74/2006-07 ದಿನಾಂಕ: 17-10-2006.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 20-7-2007.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)79/2007-08 ದಿನಾಂಕ: 12-11-2007.
5) ಕಾರಣ ಕೇಳುವ ನೋಟೀಸ್ ಸಂಖ್ಯೆ: ಒಇ 342 ಪೊಸಿಅ 2007 ದಿನಾಂಕ: 26-11-2007.
6) ಅರ್ಜಿದಾರರ ಸಮಜಾಯಿಷಿ ದಿನಾಂಕ: 28-02-2008.

**ಪ್ರಸ್ತಾವನೆ:**

ಶ್ರೀ ಎಲ್. ಬಾಬುರೆಡ್ಡಿ, ಇವರು ಕೋಲಾರ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಅಪರಾಧ ವಿಭಾಗದಲ್ಲಿ ಪಿ.ಎಸ್.ಐ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

"ಜೀಪ್ ಸಂಖ್ಯೆ: ಕೆಎ-07-ಬಿ-12ನ್ನು ತೆಗೆದುಕೊಂಡು ಹೋಗಿ ದುರುಪಯೋಗ ಪಡಿಸಿಕೊಂಡು ಕರ್ತವ್ಯದಲ್ಲಿ ಅತೀವ ದುರ್ನಡತೆಯನ್ನು ತೋರ್ಪಡಿಸಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೋಲಾರ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 17-3-2006ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡಲಾಗಿದೆ. ದಿನಾಂಕ: 07-12-05 ರಿಂದ 17-12-05ರ ವರೆಗಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು. ಇವರು ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ ದಿನಾಂಕ: 07-12-05 ರಿಂದ 17-12-05ರ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 17-10-2006ರಲ್ಲಿ ಆದೇಶಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ಮೇಲ್ಮನವಿ ಪ್ರಾಧಿಕಾರದ ಆದೇಶವನ್ನು ಮಾರ್ಪಡಿಸಿ ದಂಡನೆಯನ್ನು ಹೆಚ್ಚಿಸುವ ಸಲುವಾಗಿ ಓದಲಾದ (5)ರಲ್ಲಿ ಅರ್ಜಿದಾರರಿಗೆ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಿ ಸಮಜಾಯಿಷಿಯನ್ನು ಕೋರಲಾಗಿತ್ತು ಓದಲಾದ (6)ರಲ್ಲಿ ಅರ್ಜಿದಾರರು ನೀಡಲಾದ ಸಮಜಾಯಿಷಿಯನ್ನು ಸರ್ಕಾರವು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 342 ಪೊಸಿಅ 2007, ಬೆಂಗಳೂರು, ದಿನಾಂಕ 15–7–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಲ್. ಬಾಬುರೆಡ್ಡಿ, ಮಾಜಿ ಪಿ.ಎಸ್.ಐ., ಕೋಲಾರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1857

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿ. ಅಣ್ಣಾನಾಯ್ಕ, ಪಿ.ಸಿ. ಕಳಸ ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಇವರ ಆದೇಶ ಸಂಖ್ಯೆ: ಡಿಇ 1/2007 ಓಬಿ: 128/2008 ದಿನಾಂಕ: 22–4–2008.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ 2/ಮೇಲ್ಮನವಿ/02/2008 ದಿನಾಂಕ: 31–01–2009.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 09–3–2010.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)92/2009–10 ದಿನಾಂಕ: 11–05–2010

**ಪ್ರಸ್ತಾವನೆ:**

ಶ್ರೀ ಬಿ. ಅಣ್ಣಾನಾಯ್ಕ, ಪಿ.ಸಿ. ಕಳಸ ಪೊಲೀಸ್ ಠಾಣೆ, ಚಿಕ್ಕಮಗಳೂರು, ಇವರು ಅನಧಿಕೃತವಾಗಿ ಗೈರು ಹಾಜರಾದ ಕಾರಣದ ಮೇಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

1. ಪಂಚನಹಳ್ಳಿ ಠಾಣೆಯಿಂದ ಕಳಸಾ ಪೊಲೀಸ್ ಠಾಣೆಗೆ ವರ್ಗಾವಣೆ ಆಗಿರುವ ಆದೇಶವನ್ನು ಸಕಾಲದಲ್ಲಿ ಸ್ವೀಕರಿಸಿರುವುದಿಲ್ಲ.
2. ದಿನಾಂಕ 7–7–2006 ರಿಂದ 15–10–2006 ರವರೆಗೆ ಅನಧಿಕೃತವಾಗಿ ಗೈರುಹಾಜರಾಗಿರುತ್ತಾರೆ.
3. ಮೇಲಾಧಿಕಾರಿಗಳ ಆದೇಶವನ್ನು ಪಾಲಿಸಿರುವುದಿಲ್ಲ (ಡೆಸರ್ಟರ್ ನೋಟೀಸನ್ನು ಸ್ವೀಕರಿಸಿದ ನಂತರವೂ ಕೂಡ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುವುದಿಲ್ಲ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 22–4–08ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ವೇತನಕ್ಕೆ ಮೂರು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಬಾಧಕವಾಗುವಂತೆ ಇಳಿಸಲಾಗಿದೆ ನಂತರ ಹೊಸದಾಗಿ ವಾರ್ಷಿಕ ವೇತನ ಬಡ್ತಿಯನ್ನು ಪಡೆಯುವುದು. ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ಅವಧಿ ದಿನಾಂಕ: 01–07–2006 ರಿಂದ 15–10–2006 ರವರೆಗಿನ ಅವಧಿಯನ್ನು ವೇತನ ರಹಿತ ರಜೆ ಎಂದು ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು, ಇವರು ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಗಳಿಸುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಎರಡು ವರ್ಷಗಳ ಕಾಲ ಮುಂದೂಡಿ ಅನಧಿಕೃತವಾಗಿ ಗೈರುಹಾಜರಾದ ದಿನಾಂಕ: 01–07–2006 ರಿಂದ 15–10–2006 ರವರೆಗಿನ ಅವಧಿಯನ್ನು ವೇತನ ರಹಿತ ರಜೆ ಎಂದು ಪರಿಗಣಿಸಿ ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 31–01–2009ರಲ್ಲಿ ಆದೇಶಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 46 ಪೊಸಿಅ 2010, ಬೆಂಗಳೂರು, ದಿನಾಂಕ 15–7–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ. ಅಣ್ಣಾನಾಯ್ಕ, ಪಿ.ಸಿ. ಕಳಸ ಪೊಲೀಸ್ ಠಾಣೆ, ಚಿಕ್ಕಮಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1858

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎ.ಪಿ. ಕರಪ್ಪನವರ್ ಕೆ.ಎ.ಎಸ್. ಅಧಿಕಾರಿ ಹಾಗೂ ಇತರರ ವಿರುದ್ಧ ಜಂಟಿ ವಿರುದ್ಧ ಇಲಾಖಾ ವಿಚಾರಣೆ–

ಮಂಡನಾಧಿಕಾರಿಯನ್ನು ಬದಲಾಯಿಸಿ ನೇಮಕ ಮಾಡಲು ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂ:ಸಿಆಸುಇ 66 ಎಸ್‌ಇಎನ್ 2002 ದಿ: 24–07–07

**2.** ಜಿಲ್ಲಾಧಿಕಾರಿಗಳು, ಧಾರವಾಡ ರವರ ಪತ್ರ ಸಂ:ಸಿಬ್ಬಂದಿ(1)/ನೇರ /142 04–05 ದಿ: 29–05–2010

**ಪ್ರಸ್ತಾವನೆ :**

ಮೇಲೆ ಕ್ರ.ಸಂ.(1) ರಲ್ಲಿ ಓದಲಾದ ಆದೇಶದಲ್ಲಿ ದಿ: 20–03–92 ರಿಂದ ದಿ: 07–07–2000 ರವರೆಗೆ ಹಿಡಕಲ್ ಯೋಜನೆಯಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಈ ಕೆಳಕಂಡ ಅಧಿಕಾರಿ ನೌಕರರುಗಳ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಬೆಳಗಾಂ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿತ್ತು.

1. ಶ್ರೀ ಎ.ಪಿ. ಕೆರಪ್ಪನವರ್, ಕೆ.ಎ.ಎಸ್
2. ಶ್ರೀ ಬಿ.ಎಂ. ಹಲಗತ್ತಿ, ಕೆ.ಎ.ಎಸ್
3. ಶ್ರೀ ಎಂ.ವಿ. ಗೊಂಗಡಶೆಟ್ಟಿ, ಕೆ.ಎ.ಎಸ್
4. ಶ್ರೀ ಎನ್.ಎಚ್. ಸುಳೇಬಾವಿ, ಕೆ.ಎ.ಎಸ್
5. ಶ್ರೀ ಎ.ಎಸ್. ಹೊಸಮನಿ, ಪ್ರ.ದ.ಸ
6. ಶ್ರೀ ಜಿ.ಬಿ. ಜಹೇಜ, ಪ್ರ.ದ.ಸ

ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ಧಾರವಾಡ ರವರು ಮೇಲೆ ಕ್ರಮ ಸಂ.(2) ರಲ್ಲಿ ಓದಲಾದ ಪತ್ರದಲ್ಲಿ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ಮಂಡಿಸಲು ನೇಮಕಗೊಂಡಿರುವ ಮಂಡನಾಧಿಕಾರಿಗಳು ಪದೇ ಪದೇ ವಿಚಾರಣೆಗೆ ಗೈರು ಹಾಜರಾಗುತ್ತಿರುವ ಕಾರಣ ಈ ಪ್ರಕರಣದಲ್ಲಿ ವಿಚಾರಣೆ ವಿಳಂಬವಾಗುತ್ತಿದ್ದು, ಧಾರವಾಡದಲ್ಲಿ ಕಾರ್ಯನಿರ್ವಹಿಸುತ್ತಿರುವ ಯಾವುದಾದರೂ ಅಧಿಕಾರಿಯನ್ನು ಮಂಡನಾಧಿಕಾರಿಯಾಗಿ ನೇಮಿಸಿದ್ದಲ್ಲಿ ವಿಚಾರಣೆ ತ್ವರಿತವಾಗಿ ಮುಕ್ತಾಯ ಮಾಡಬಹುದೆಂದು ತಿಳಿಸುತ್ತಾ ಸೂಕ್ತ ಆದೇಶ ಹೊರಡಿಸಲು ವಿನಂತಿಸಿದ್ದಾರೆ. ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ಅಪರ ಜಿಲ್ಲಾಧಿಕಾರಿಗಳು ಹಾಗೂ ಅಪರ ಜಿಲ್ಲಾ ದಂಡನಾಧಿಕಾರಿಗಳು ಧಾರವಾಡ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ನಿರ್ಣಯಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂ: ಸಿಆಸುಇ 161 ಕೆಇವಿ 2007, ಬೆಂಗಳೂರು, ದಿ: 12ನೆ ಜುಲೈ 2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎ.ಪಿ. ಕೆರಪ್ಪನವರ್, ಕೆ.ಎ.ಎಸ್ ಹಾಗೂ ಇತರರ ವಿರುದ್ಧ ಮಾಡಲಾದ ಆರೋಪಗಳ ಕುರಿತು ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ದಿ: 24–07–07 ರ ಸರ್ಕಾರಿ ಆದೇಶದಲ್ಲಿ ಮಂಡನಾಧಿಕಾರಿಯನ್ನಾಗಿ ನೇಮಿಸಲಾದ ಬೆಳಗಾಂ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರ ಬದಲಾಗಿ ಅಪರ ಜಿಲ್ಲಾಧಿಕಾರಿಗಳು ಹಾಗೂ ಅಪರ ಜಿಲ್ಲಾ ದಂಡಾಧಿಕಾರಿಗಳು, ಧಾರವಾಡ ಜಿಲ್ಲೆ, ಧಾರವಾಡ ರವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು–2)

ಪಿ.ಆರ್. 1898

## COMMERCE AND INDUSTRIES SECRETARIAT

### CORRIGENDUM

**Sub:** Approval to the Project Proposal of M/s. Vishwaraj Infrastructure Pvt. Ltd., to establish a "1000 MW Gas Based Power Plant and Development of Composite Industrial Park" in Hukkeri Taluk, Belgaum District.

**Read:** Govt. Order No. CI 142 SPI 2010, Dated: 29.04.2010

In Order portion of the Government Order No. CI 142 SPI 2010, Dated: 29.04.2010. under infrastructure facilities at Sl. No. 1. **"Land"** please be read as **"1100 acres"** in Vantamuri, being acquired by KIADB.

Infrastructure facilities, incentives, concessions and other terms and conditions remain the same as in the G.O. read at (1) above.

By Order and in the name of the Governor of Karnataka

**Aparna Pavate**

P.R. 1899

Desk Officer (Technical Cell)

Commerce & Industries Department.

## COMMERCE AND INDUSTRIES SECRETARIAT

### CORRIGENDUM

**Sub:** Approval to the Project Proposal of M/s. Shree Renuka Infraprojects Ltd., to establish a "1100 MW Thermal Power Plant" at Vantamuri Village, Hukkeri Taluk, Belgaum District.

**Read:** Govt. Order No. CI 106 SPI 2010, Dated: 29.04.2010

In Order portion of the Government Order No. CI 106 SPI 2010, Dated: 29.04.2010. under infrastructure facilities at Sl. No. 1, the extent of land please be read as **"1100 acres"** instead of **"1350 acres"** .

Infrastructure facilities, incentives, concessions and other terms and conditions remain the same as in the G.O. read at (1) above.

By Order and in the name of the Governor of Karnataka

**Aparna Pavate**

P.R. 1900

Desk Officer (Technical Cell)

Commerce & Industries Department.

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಭದ್ರಾವತಿ ನಗರದ ರೈಲು ನಿಲ್ದಾಣದ ಹತ್ತಿರ ಬರುವ ಎಲ್.ಸಿ.ಸಂಖ್ಯೆ 32ರ ಬದಲಿಗೆ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣದ ಕಾಮಗಾರಿಗೆ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂ.ಮೂಅಇ 27 ರಾರಾಹೆ 08 ದಿನಾಂಕ 22–09–2009.
2. ದಿನಾಂಕ 08–02–2010 ಸಂಖ್ಯೆ ಮೂಅಇ 27 ರಾರಾಹೆ 2008 ರ ಸರ್ಕಾರಿ ಆದೇಶ.
3. ದಿನಾಂಕ 18–05–2010 ಸಂಖ್ಯೆ ಮೂಅಇ 27 ರಾರಾಹೆ 2008 ರ ಸರ್ಕಾರಿ ಆದೇಶ.
4. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದ), ಲೋಕೋಪಯೋಗಿ ಇಲಾಖೆ, ಬೆಂಗಳೂರು ರವರ ದಿನಾಂಕ: 29.06.2010 ರ ಪತ್ರ ಸಂಖ್ಯೆ: ಸಿಬಿಎಸ್‌ಹಭಪ:34:ಹಭಪ:5465: 2010–11.

**ಪ್ರಸ್ತಾವನೆ :**

ಭದ್ರಾವತಿ ರೈಲು ನಿಲ್ದಾಣದ ಬಳಿ ಇರುವ ಎಲ್.ಸಿ.ಸಂ.32ರ ಬದಲಿಗೆ ರಸ್ತೆ ಮೇಲು ಸೇತುವೆಗೆ ಕೂಡು ರಸ್ತೆ ನಿರ್ಮಾಣದ ಕಾಮಗಾರಿಯನ್ನು ರೂ. 12.00 ಕೋಟಿಗಳ ಪರಿಷ್ಕೃತ ಅಂದಾಜಿನಲ್ಲಿ ಲೋಕೋಪಯೋಗಿ ಇಲಾಖೆಯಿಂದ ಕೈಗೆತ್ತಿಕೊಳ್ಳಲು ಮೇಲೆ ಓದಲಾದ (1) ರ ಸರ್ಕಾರಿ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿತ್ತು.

2. ಭದ್ರಾವತಿ ನಗರದ ರೈಲು ನಿಲ್ದಾಣದ ಹತ್ತಿರ ಬರುವ ಎಲ್.ಸಿ.ಸಂಖ್ಯೆ 32 ರ ಬದಲಿಗೆ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣದ ಕಾಮಗಾರಿಯ ಯುಟಿಲಿಟಿ ಸ್ಥಳಾಂತರಕ್ಕೆ ರೂ. 2.00 ಕೋಟಿಯನ್ನು (ರೂಪಾಯಿ ಎರಡು ಕೋಟಿಗಳು ಮಾತ್ರ) ಮೇಲೆ ಓದಲಾದ (2) ರ ಆದೇಶದಲ್ಲಿ ಬಿಡುಗಡೆ ಮಾಡಲಾಗಿತ್ತು.

3. ವಿದ್ಯುತ್ ಕಂಬಗಳ ಹಾಗೂ ಇತರೆ ಯುಟಿಲಿಟಿ ಸ್ಥಳಾಂತರಗಳ ಬಿಲ್ಲಿನ ಮೊತ್ತವನ್ನು ನಿಗದಿತ ಅವಧಿಯಲ್ಲಿ ಸಲ್ಲಿಸದೇ ಇರುವುದರಿಂದ ಮೇಲ್ಕಂಡ ಕಾಮಗಾರಿಗೆ ಬಿಡುಗಡೆ ಮಾಡಲಾದ ಮೊತ್ತವನ್ನು ದಿನಾಂಕ 31.03.2010 ರೊಳಗಾಗಿ ರೂ. 4,950/– ಗಳನ್ನು ಡ್ರಾ ಮಾಡಲಾಗಿದ್ದು, ಉಳಿಕೆ ಮೊತ್ತವು ಲ್ಯಾಪ್ಸ್ ಆಗಿದೆ ಇಂದು ತಿಳಿಸಿದ್ದರ ಹಿನ್ನೆಲೆಯಲ್ಲಿ ಮೇಲೆ ಓದಲಾದ (3)ರ ಸರ್ಕಾರಿ ಆದೇಶದಲ್ಲಿ ರೂ. 2.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿತ್ತು. ಸದರಿ ಮೊತ್ತದಲ್ಲಿ ರೂ. 151.00 ಲಕ್ಷಗಳನ್ನು ಖರ್ಚು ಮಾಡಿದ್ದು, ಈಗ ಮತ್ತೆ ಕಾಮಗಾರಿಗೆ ವೆಚ್ಚವನ್ನು ಭರಿಸಲು ರೂ. 2.00 ಕೋಟಿಗಳನ್ನು ಬಿಡುಗಡೆ ಮಾಡಬೇಕೆಂದು ಕಾರ್ಯಪಾಲಕ ಅಭಿಯಂತರರು ನೀಡಿರುವ ವರದಿಯು ಸಮಂಜಸವಾಗಿದೆ ಎಂದು

ತಿಳಿಸುತ್ತಾ, ಸದರಿ ಕಾಮಗಾರಿಯ ವೆಚ್ಚವನ್ನು ಭರಿಸಲು ರೂ. 2.00 ಕೋಟಿ ಮೊತ್ತವನ್ನು ಬಿಡುಗಡೆ ಮಾಡಬೇಕೆಂದು ಮೇಲೆ ಓದಲಾದ (4)ರ ಪತ್ರದಲ್ಲಿ ಮುಖ್ಯ ಇಂಜಿನಿಯರವರು ಕೋರಿರುತ್ತಾರೆ.

4. ಈ ಅಂಶಗಳೆಲ್ಲವನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ. ಮೂಅಇ 27 ರಾರಾಹೆ 2008, ಬೆಂಗಳೂರು, ದಿನಾಂಕ 20-07-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಭದ್ರಾವತಿ ನಗರದ ರೈಲು ನಿಲ್ದಾಣದ ಹತ್ತಿರ ಬರುವ ಎಲ್.ಸಿ.ಸಂಖ್ಯೆ 32 ರ ಬದಲಿಗೆ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣದ ಕಾಮಗಾರಿಗೆ ರೂ. 1.00 ಕೋಟಿಗಳನ್ನು (ಒಂದು ಕೋಟಿ ರೂಪಾಯಿಗಳನ್ನು ಮಾತ್ರ) ಬಿಡುಗಡೆ ಮಾಡಿದೆ. ಈ ವೆಚ್ಚವನ್ನು 2010-11ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "5465-01-190-3-04-(ಯೋಜನೆ)-211-ಕೆ-ರೈಡ್/ಆರ್‌ಓಬಿ/ಆರ್‌ಯುಬಿ/ಬಂಡವಾಳ" ಇದರಡಿಯಲ್ಲಿ ರಸ್ತೆ ಮೇಲುಸೇತುವೆ/ಕೆಳಸೇತುವೆಗಳ ನಿರ್ಮಾಣಕ್ಕೆ ಒದಗಣೆ ಮಾಡಿರುವ ರೂ. 30.00 ಕೋಟಿಗಳಿಂದ ಭರಿಸತಕ್ಕದ್ದು.

3. ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ, ಶಿವಮೊಗ್ಗ ವಿಶೇಷ ವಿಭಾಗ, ಶಿವಮೊಗ್ಗ ಇವರು ಸಾದಿಲ್ವಾರು ಬಿಲ್ಲಿನ ಮೂಲಕ ಮೊಬಲಗನ್ನು ಸೆಳೆದು ಸಂಬಂಧಪಟ್ಟವರಿಗೆ ಖಜಾನೆ ಚೆಕ್ ಮೂಲಕ ಕೊಡತಕ್ಕದ್ದು.

4. ಈ ಆದೇಶವನ್ನು ದಿನಾಂಕ 16.5.2008 ಸಂಖ್ಯೆ FD 1TFP 2008, ಸರ್ಕಾರಿ ಆದೇಶದಲ್ಲಿ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1901

**ಕೆ.ಎಸ್.ವೇಣುಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಕ.ನಾ.ಸೇ.ನಿಯಮಗಳ ನಿಯಮ 247 (I) ಮತ್ತು 224-.A ರ ಅನ್ವಯ ನ್ಯಾಯಾಂಗ ಅಧಿಕಾರಿಗಳಿಗೆ ಹೆಚ್ಚುವರಿ ಅರ್ಹತಾದಾಯಕ ಸೇವೆಯನ್ನು ನಿವೃತ್ತಿ ಸೌಲಭ್ಯಗಳಿಗೆ ಪರಿಗಣಿಸುವ ಕುರಿತು.

**ಓದಲಾಗಿದೆ :** ರಿಜಿಸ್ಟ್ರಾರ್ ಜನರಲ್‌ರವರ ಪತ್ರದ ಸಂಖ್ಯೆ: ಜಿಒಬಿ.1.225/2007, ದಿನಾಂಕ: 18-02-2010.

**ಪ್ರಸ್ತಾವನೆ :**

ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ಬೆಂಗಳೂರು ಇವರು ಮೇಲೆ ಓದಲಾದ ಪತ್ರದೊಂದಿಗೆ ನ್ಯಾಯಾಂಗ ಅಧಿಕಾರಿಗಳ ಸೇವಾ ವಿವರಗಳನ್ನೊಳಗೊಂಡ ಪಟ್ಟಿಯನ್ನು ಲಗತ್ತಿಸಿ ಕಳುಹಿಸುತ್ತಾ, ಸದರಿ ಅಧಿಕಾರಿಗಳಿಗೆ ಕ.ನಾ.ಸೇ.ನಿಯಮಾವಳಿಗಳ ನಿಯಮ 247(I) ಮತ್ತು 224-ಎರ ಅನ್ವಯ ಲಭ್ಯವಾಗುವ ಅರ್ಹತಾದಾಯಕ ಸೇವೆಯನ್ನು ನಿವೃತ್ತಿ ಸೌಲಭ್ಯಗಳಿಗೆ ಪರಿಗಣಿಸಲು ಪ್ರಸ್ತಾಪಿಸಿರುತ್ತಾರೆ.

ಸದರಿ ಪಟ್ಟಿಯಲ್ಲಿನ. ಅಧಿಕಾರಿಗಳ ಸೇವಾ ವಿವರಗಳನ್ನು ಪರಿಶೀಲಿಸಿ ಕ.ನಾ.ಸೇ.ನಿಯಮಗಳ ನಿಯಮ 247 (I) ಮತ್ತು 224-ಎ ರ ಅನ್ವಯ ಅವರುಗಳಿಗೆ ಲಭ್ಯವಾಗುವ ಹೆಚ್ಚುವರಿ ಅರ್ಹತಾದಾಯಕ ಸೇವೆಯನ್ನು ಮಂಜೂರು ಮಾಡಲು ನಿರ್ಧರಿಸಿದೆ.

ಅಂತೆಯೇ ಪರಿಶೀಲಿಸಿ ಈ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 227 ಎಲ್‌ಎಸಿ 2008 (ಭಾ), ಬೆಂಗಳೂರು, ದಿನಾಂಕ 19-07-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ- I ಮತ್ತು ಖಖ ರಲ್ಲಿ ಕ್ರಮವಾಗಿ ಪಟ್ಟಿ ಮಾಡಿರುವಂತೆ ನ್ಯಾಯಾಂಗ ಅಧಿಕಾರಿಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247 (I) ಮತ್ತು 224-ಎರ ರೀತ್ಯಾ ಅರ್ಹವಾಗುವ ಹೆಚ್ಚುವರಿ ಸೇವೆಯನ್ನು ಅವರುಗಳ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದ ಪರಿಗಣಿಸಲು ಅವರುಗಳ ಹೆಸರಿನ ಮುಂದೆ ನಮೂದಿಸಿರುವಂತೆ ಹೆಚ್ಚುವರಿ ಅರ್ಹತಾದಾಯಕ ಸೇವೆಯನ್ನು ಮಂಜೂರು ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 124 ವೆಚ್ಚ-10/2010. ದಿನಾಂಕ: 26.03.2010ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ನಾ. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ-1)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಲಾ 227 ಎಲ್‌ಎಸಿ 2008 (ಭಾ), ಬೆಂಗಳೂರು, ದಿನಾಂಕ 19-07-2010**

**ಅನುಬಂಧ-I**

| ಕ್ರ. ಸಂ. | ನ್ಯಾಯಾಧೀಶರ ಹೆಸರು ಮತ್ತು ಪದನಾಮ ಶ್ರೀ/ಶ್ರೀಮತಿ | ನಿಯಮ 247 (ಖ) ರನ್ವಯ ಲಭ್ಯವಾಗುವ ಹೆಚ್ಚುವರಿ ಅರ್ಹತಾದಾಯಕ ಸೇವಾವಧಿ |
|---|---|---|
| 1 | 2 | 3 |
| 1 | ಪ್ರಕಾಶ್ ಸಂಗಪ್ಪ ಎಳವರ್<br>ಸಿವಿಲ್ ಜಡ್ಜ್ (ಕಿ.ವಿ.) | 5 ವರ್ಷಗಳು |

| | | |
|---|---|---|
| 2 | ಮಹಮ್ಮದ್ ಇಸ್ಮಾಯಿಲ್<br>ಸಿವಿಲ್ ಜಡ್ಜ್ (ಹಿ.ವಿ.) | 5 ವರ್ಷಗಳು |
| 3 | ಚಂದ್ರಶೇಖರ ನಾರಾಯಣ ಸುಣಗಾರ<br>ಸಿವಿಲ್ ಜಡ್ಜ್ (ಹಿ.ವಿ.) | 5 ವರ್ಷಗಳು |
| 4. | ಇಬ್ರಾಹಿಂ ಪೀರಾಸಾಬ್ ಬಿದರಿ<br>ಸಿವಿಲ್ ಜಡ್ಜ್ (ಹಿ.ವಿ.) & ಜೆಎಂಎಫ್‌ಸಿ, ಸಾಗರ | 5 ವರ್ಷಗಳು |

**ನಾ. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ–1)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಲಾ 227 ಎಲ್‌ಎಸಿ 2008 (ಭಾ), ಬೆಂಗಳೂರು, ದಿನಾಂಕ 19–07–2010**

**ಅನುಬಂಧ–II**

| ಕ್ರ. ಸಂ. | ನ್ಯಾಯಾಧೀಶರ ಹೆಸರು ಮತ್ತು ಪದನಾಮ ಶ್ರೀ/ಶ್ರೀಮತಿ | ನಿಯಮ 224 (ಎ) ರನ್ವಯ ಲಭ್ಯವಾಗುವ ಹೆಚ್ಚುವರಿ ಅರ್ಹತಾದಾಯಕ ಸೇವಾವದಿ |
|---|---|---|
| 1 | 2 | 3 |
| 1 | ಕೊಟ್ರಯ್ಯ ಎನ್. ಹಿರೇಮಠ<br>ಂಜ–ಾಠಿಥಿ ಜಿಲ್ಲಾ ನ್ಯಾಯಾಧೀಶರು | ದಿ: 24.06.1994 ರಿಂದ<br>28.02.1998 ರವರೆಗೆ |

**ನಾ ಮಹಾಲಕ್ಷ್ಮಮ್ಮ**
ಪಿ.ಆರ್. 1902
ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ–1)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## COMMERCE & INDUSTRIES SECRETARIAT

**Sub :-** Approval to the Project Proposal of M/s. Prestige Estates Projects Ltd., to establish a **"Development of IT/ITES SEZ"** at Devanahalli industrial Area, Devanahalli Taluk, Bangalore Rural District.

**Read :-** 1. Proceedings of the 22nd State High Level Clearance Committee (SHLCC) Meeting held on 24-05-2010.
2. Proceedings of the 23rd State High Level Clearance Committee (SHLCC) Meeting held on 19-06-2010.

**Preamble:**

M/s. Prestige Estates Projects Ltd., proposes to establish a "Development of IT/ITES SEZ" at Devanahalli Industrial Area, Devanahalli Taluk, Bangalore Rural District, with an investment of Rs. 728 crores. Generating employment to about 25000 persons.

In the 22nd State High Level Clearance Committee (SHLCC) Meeting, held on 24.05.2010, the Proposal of the Company was approved, but Govt. Order was not issued as the records of the proceedings did not mentioned IT/ITES SEZ.

Government has examined the recommendations made by the State High Level Clearance Committee in the 22nd & 23rd Meeting held on 24.05.2010 & 19.06.2010 respectively, in all aspects.

Hence the following order.

**Government Order No. CI 236 SPI 2010, Bangalore, Dated 16-07-2010**

Government is pleased to accord in principle approval to the Project Proposal of M/s. Prestige Estates Projects Ltd., to establish a "Development of IT/ITES SEZ" at Devanahalli Industrial Area, Devanahalli Taluk, Bangalore Rural District, with an investment of Rs. 728 crores, generating employment to about 25000 persons and extend the following infrastructure facilities, incentives and concessions.

**INFRASTRUCTURE FACILITIES :**

1. **Land :** 25 acres – at KIADB Indstrial Area, Devanahalli, Bangalore Rural District
2. **Water :** 1 MLD of water to be supplied by KIADB.
3. **Power :** 10000 KVA to be serviced by BESCOM
4. **Incentives & Concessions :** As per Prevailing SEZ Policy of the State.

**GENERAL TERMS AND CONDITIONS :**

1. **Environment :** The promoters to obtain CFE and CFO from KSPCB and environmental clearance from MOEF, GOI.
2. **Employment :** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of

Karnataka. A copy of Human Resources Development plan shall be sent to the Commissioner for I.D. & Director of Industries and Commerce for monitoring.

3. **Vendor Development :** Where ever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
4. **Social Infrastructure Development :** The company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.

5.**Others :**

(a) The project proponents shall provide employment to at least one member of the family of each land looser as the land is being acquired through KIADB.

(b) The project proponents shall adopt rain water harvesting waste water recycling and water conservation techniquies. Zero discharge facility should be adopted wherever applicable.

(c) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period of two years from the date of issue.

By Order and in the name of the Governor of Karnataka

**Aparna Pavate**

Desk Officer (Technical Cell)

Commerce & Industries Department

P.R. 1903

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀಮತಿ ಯಶೋದಮ್ಮ, ದ್ವಿ.ದ.ಸ. ರವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** (1) ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ: ಸಿಬ್ಬಂದಿ–6/73/2008–09 ದಿನಾಂಕ 17–01–2009.

(2) ಸರ್ಕಾರದ ಆದೇಶ ಸಂಖ್ಯೆ: ಒಇ 22 ಪೊಸಿಲಿ 2009 ದಿನಾಂಕ: 04–01–2010.

(3) ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ: ಸಿಬ್ಬಂದಿ–6/73/2008–09 ದಿನಾಂಕ: 03–02–2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಕೋರಿರುವಂತೆ ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಶ್ರೀಮತಿ ಯಶೋದಮ್ಮ, ದ್ವಿತೀಯ ದರ್ಜೆ ಸಹಾಯಕರು ರವರಿಗೆ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(1) (೨)ರನ್ವಯ ದಿನಾಂಕ 26–10–2008 ರಿಂದ 25–10–2009ರ ವರೆಗೆ ಖಾಯಂಪೂರ್ವ ಅವಧಿಯನ್ನು ವಿಸ್ತರಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಶ್ರೀಮತಿ ಯಶೋದಮ್ಮ, ದ್ವಿತೀಯ ದರ್ಜೆ ಸಹಾಯಕರು ರವರು ದಿನಾಂಕ 02–02–2009ರಂದು ನಡೆದ 2008ನೇ ಸಾಲಿನ ಇಲಾಖಾ ಪರೀಕ್ಷೆಯ ಎರಡನೇ ಅಧಿವೇಶನದಲ್ಲಿ ಅಕೌಂಟ್ಸ್ ಲೋಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದರಿಂದ ಉಲ್ಲೇಖ(2)ರಲ್ಲಿ ಹೊರಡಿಸಿರುವ ಆದೇಶವನ್ನು ಮಾರ್ಪಡಿಸಿ ಸದರಿ ಯವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ 26–10–2008 ರಿಂದ 25–10–2009ರ ವರೆಗೆ ವಿಸ್ತರಿಸಿರುವುದನ್ನು ಪರಿಷ್ಕರಿಸಿ ದಿನಾಂಕ 26–10–2008 ರಿಂದ 02–02–2009ರ ವರೆಗೆ (ಅಕೌಂಟ್ಸ್ ಲೋಯರ್ ಪರೀಕ್ಷೆಯಲ್ಲಿ ಉತ್ತೀರ್ಣಗೊಂಡ ದಿನಾಂಕ) ವಿಸ್ತರಿಸುವಂತೆ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 90 ಪೊಸಿಲಿ 2010, ಬೆಂಗಳೂರು, ದಿನಾಂಕ: 21–7–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀಮತಿ ಯಶೋದಮ್ಮ, ದ್ವಿತೀಯ ದರ್ಜೆ ಸಹಾಯಕರು ಇವರ ಖಾಯಂ ಪೂರ್ವ ಅವಧಿಯನ್ನು (2) ರಲ್ಲಿ ಓದಲಾದ ಆದೇಶದಲ್ಲಿ ದಿನಾಂಕ 26–10–2008 ರಿಂದ 25–10–2009 ರವರೆಗೆ ವಿಸ್ತರಿಸಿರುವುದನ್ನು ಪರಿಷ್ಕರಿಸಿ ದಿನಾಂಕ 26–10–2008 ರಿಂದ 02–02–2009 ರವರೆಗೆ (ಅಕೌಂಟ್ಸ್ ಲೋಯರ್ ಪರೀಕ್ಷೆಯಲ್ಲಿ ಉತ್ತೀರ್ಣಗೊಂಡ ದಿನಾಂಕ) ವಿಸ್ತರಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1904

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೀದರ್ ಜಿಲ್ಲೆ ಔರಾದ್ ತಾಲ್ಲೂಕು ಆಲೂರು–ಬೇಲೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 26/03/2010ರ ಪತ್ರದ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2009–10/2112.

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬೀದರ್ ಜಿಲ್ಲೆ, ಔರಾದ್ ತಾಲ್ಲೂಕು ಆಲೂರು–ಬೇಲೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಶೆಂಬಳ್ಳಿ, ಜಿರಗಾ (ಕೆ), ಖಾಶಂಪೂರ ಗ್ರಾಮಗಳ ಸರ್ವೆ ನಂಬರ್‌ಗಳಿಗೆ ಸೇರಿದ ಜಮೀನುಗಳಿಗೆ ಬೀದರ್ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 25/05/2000
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 30–04–2002

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಲ್ಲಿ ಸೇರಿದ್ದ ಕೆಲವೊಂದು ಸ.ನಂ.ಗಳ ಭೂಮಾಲೀಕರು ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ದಾಖಲಿಸಿದ್ದ ಎಲ್.ಎ.ಸಿ. ಪ್ರಕರಣ ಸಂಖ್ಯೆ:17/05, 19/05, 27/05, 29/05 ಮತ್ತು 31/05 ಗಳಲ್ಲಿ ಬೀದರ್‌ನ ಹಿರಿಯ ಶ್ರೇಣಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಪ್ರಕರಣಗಳನ್ನು ಒಟ್ಟುಗೂಡಿಸಿ ಮುಖ್ಯ ಪ್ರಕರಣ ಎಲ್.ಎ.ಸಿ. 21/05ರಲ್ಲಿ ಹೆಚ್ಚಿನ ಪರಿಹಾರ ಧನ ಪಾವತಿಸಲು ಮಾನ್ಯ ಸಿವಿಲ್ ನ್ಯಾಯಾಲಯವು ದಿನಾಂಕ 19/04/08ರ ಸಾಮಾನ್ಯ ತೀರ್ಪಿನಲ್ಲಿ ಆದೇಶಿಸಿದೆ. ಈ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಂದಾಯ ಇಲಾಖೆ (ಎಲ್ಎಸಿ)ಯ ಪತ್ರ ಸಂಖ್ಯೆ: ಆರ್‌ಡಿ 184 ಎಲ್ಸಿಜಿ 2010, ದಿನಾಂಕ 19–07–2010ರಲ್ಲಿ ಅಭಿಪ್ರಾಯ ನೀಡಲಾಗಿದೆ. ಪಾವತಿಸಬೇಕಾದ ಹೆಚ್ಚಿನ ಪರಿಹಾರ ಧನದ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್ಎಸಿ ಸಂಖ್ಯೆ | ಸ.ಸಂ. | ವಿಸ್ತೀರ್ಣ ಎ–ಗುಂ | ಗ್ರಾಮ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| 1 | 17/05 | 18/1–2 | 1–09 | ಖಾಶಂಪೂರ | 156072 |
| 2 | 19/05 | 8/2 | 0–38 | ಜಿರಗಾ (ಕೆ) | 102949 |
| 3 | 21/05 | 8/2 | 0–19 | ಜಿರಗಾ (ಕೆ) | 51473 |
| 4 | 27/05 | 17/1 | 1–12 | ಖಾಶಂಪೂರ | 165627 |
| 5 | 29/05 | 19/1 | 0–10 | ಶೇಂಬಳ್ಳಿ | 23246 |
| 6 | 31/05 | 163/3ಎ/4ಎ | 0–38 | ಶೇಂಬಳ್ಳಿ | 88341 |
| | ಒಟ್ಟು | | | | 587708 |

*ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂ: ಸನೀಇ 63 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 27ನೇ ಜುಲೈ 2010**

ಬೀದರ್ ಜಿಲ್ಲೆ, ಔರಾದ್ ತಾಲ್ಲೂಕು ಆಲೂರು–ಬೇಲೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಶೇಂಬಳ್ಳಿ, ಜಿರಗಾ(ಕೆ), ಖಾಶಂಪೂರ ಗ್ರಾಮಗಳ ಮೇಲ್ಕಂಡ ಸರ್ವೆ ನಂಬರ್‌ಗಳಿಗೆ ಸೇರಿದ ಜಮೀನುಗಳಿಗೆ ಬೀದರ್‌ನ ಹಿರಿಯ ಶ್ರೇಣಿ ಸಿವಿಲ್ ನ್ಯಾಯಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನ ಮೊತ್ತ ರೂ. 5,87,708–00 ಗಳನ್ನು (ಐದು ಲಕ್ಷದ ಎಂಭತ್ತೈದು ಸಾವಿರದ ಏಳುನೂರ ಎಂಟು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ: 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1921

**ಹೆಚ್.ಎಸ್. ಉದಯಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆ ಪೀಠೋಪಕರಣಗಳನ್ನು ಸರಬರಾಜು ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 4 ಡಿಎಸ್‌ವೈ 2010 ದಿ: 13.5.2010.
2. ಕ.ಸಂ.ವಾ.ಪ್ರ. ಇಲಾಖೆಯ ಉಪ ಕಾರ್ಯದರ್ಶಿಯವರ ಆಪ್ತ ಶಾಖೆಯ ದಿ: 17.7.2010ರ ಮನವಿ
3. ದಿ: 6–7–2010ರ ಸರ್ಕಾರದ ಪತ್ರ : ಕಸಂವಾಪ್ರ 115 ಸ್ವೀಮರ 2010.
4. ದಿ: 21.7.2010ರ ಧನಲಕ್ಷ್ಮಿ ಎಂಟರ್‌ಪ್ರೈಸಸ್ ರವರ ಪತ್ರ ಸಂಖ್ಯೆ: ಡಿಇ/ಫರ್/4/2009–10.

**ಪ್ರಸ್ತಾವನೆ :**

ಮೇಲೆ ಓದಲಾದ (2)ರ ಮನವಿಯಲ್ಲಿ ಉಪ ಕಾರ್ಯದರ್ಶಿಯವರ ಆಪ್ತ ಸಹಾಯಕರು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಹಾಗೂ ಪ್ರವಾಸೋದ್ಯಮ ಇಲಾಖೆಯ ಹೊಸದಾಗಿ ಸೃಜಿಸಲಾದ ಉಪ ಕಾರ್ಯದರ್ಶಿಯವರ ಆಪ್ತ ಶಾಖೆಗೆ ಅಗತ್ಯವಿರುವ ಪೀಠೋಪಕರಣಗಳಿಗಾಗಿ ಮನವಿ ಸಲ್ಲಿಸಿದ್ದರು.

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಉಪ ಕಾರ್ಯದರ್ಶಿಯವರಿಗೆ ಅಗತ್ಯವಾಗಿ ಬೇಕಾಗಿರುವ ಪೀಠೋಪಕರಣಗಳನ್ನು ಖರೀದಿಸಲು ಮೇಲೆ ಓದಲಾದ (3)ರ ಪತ್ರದಲ್ಲಿ 03 ಕಂಪನಿಗಳಿಗೆ ಪತ್ರ ಬರೆದು ದರಪಟ್ಟಿ ನೀಡುವಂತೆ ಕೋರಲಾಗಿತ್ತು. ಹಾಗೂ ಅದರಂತೆ 03 ಕಂಪನಿಗಳಿಂದ ಸ್ವೀಕೃತವಾದ ದರಪಟ್ಟಿಯನ್ವಯ ಪೀಠೋಪಕರಣಗಳ ದರಪಟ್ಟಿಯು ಈ ಕೆಳಗಿನಂತಿರುತ್ತದೆ. ಹಾಗೂ ಮೂರೂ ಕಂಪನಿಗಳ ಪೀಠೋಪಕರಣಗಳ ದರ ಪಟ್ಟಿಯನ್ನು ಅನುಬಂಧದಲ್ಲಿ ನೀಡಲಾಗಿದೆ.

| ಕ್ರ.ಸಂ. | ಕಂಪನಿಯ ಹೆಸರು | ವಿವರ | ಪ್ರಮಾಣ | ಬೆಲೆ ರೂ.ಗಳಲ್ಲಿ | ಒಟ್ಟು ರೂ.ಗಳಲ್ಲಿ |
|---|---|---|---|---|---|
| 1. | ಜಿ.ಆರ್. ಎಂಟರ್‌ಪ್ರೈಸಸ್ | ಪೀಠೋಪಕರಣಗಳು | ಅನುಬಂಧದಲ್ಲಿ ಲಗತ್ತಿಸಲಾಗಿದೆ | | 34042–00 |
| 2 | ಶ್ರೀ ಜಗನ್ನಾಥ ಟ್ರೇಡರ್ಸ್ | ಪೀಠೋಪಕರಣಗಳು | | | 33414–15 |
| 3 | ಧನಲಕ್ಷ್ಮಿ ಎಂಟರ್‌ಪ್ರೈಸಸ್ | ಪೀಠೋಪಕರಣಗಳು | | | 29055–00 |

ಈ ಮೇಲ್ಕಂಡ 03 ಕಂಪನಿಗಳಿಂದ ಪಡೆದ ದರಗಳನ್ನು ಅವಲೋಕಿಸಿ ಅತಿ ಕಡಿಮೆ ದರ ನೀಡಿರುವ ಧನಲಕ್ಷ್ಮಿ ಎಂಟರ್‌ಪ್ರೈಸಸ್, ನಂ. ಡಿ/28, 1ನೇ ಮುಖ್ಯ ರಸ್ತೆ, ರಾಮಚಂದ್ರಪುರಂ, ಬೆಂಗಳೂರುರವರಿಗೆ ರೂ. 29055–00 ಗಳ (ಇಪ್ಪತ್ತೊಂಬತ್ತು ಸಾವಿರದ ಐವತ್ತೈದು ರೂ.ಗಳು ಮಾತ್ರ) ವೆಚ್ಚದಲ್ಲಿ ಪೀಠೋಪಕರಣಗಳನ್ನು ಸರಬರಾಜು ಮಾಡಲು ಈ ಕೆಳಕಂಡಂತೆ ಆದೇಶಿಸಿದೆ. ದರಪಟ್ಟಿಯು ವ್ಯಾಟ್ ತೆರಿಗೆ ಹಾಗೂ ಸಾಗಾಣೆ ವೆಚ್ಚಗಳನ್ನು ಒಳಗೊಂಡಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ. ಕಸಂವಾಪ್ರ 115 ಸ್ವೀಮರ 2010, ಬೆಂಗಳೂರು, ದಿ: 24–07–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಹೊಸದಾಗಿ ಸೃಜಿಸಲಾದ ಉಪ ಕಾರ್ಯದರ್ಶಿಯವರ ಆಪ್ತ ಶಾಖೆಗೆ ಪೀಠೋಪಕರಣಗಳನ್ನು ಸರಬರಾಜು ಮಾಡಲು 03 ಕಂಪನಿಗಳಿಂದ ದರಪಟ್ಟಿಗಳನ್ನು ಕರೆದಿದ್ದು ಅನುಬಂಧದಲ್ಲಿರುವ ಪೀಠೋಪಕರಣಗಳಿಗೆ ಅತಿ ಕಡಿಮೆ ದರ ರೂ. 29055–00 ಗಳ (ಇಪ್ಪತ್ತೊಂಬತ್ತು ಸಾವಿರದ ಐವತ್ತೈದು ರೂ.ಗಳು ಮಾತ್ರ)ಗಳನ್ನು ಸೂಚಿಸಿರುವ ಬೆಂಗಳೂರಿನ ಧನಲಕ್ಷ್ಮಿ ಎಂಟರ್‌ಪ್ರೈಸಸ್, ನಂ. ಡಿ/28, 1ನೇ ಮುಖ್ಯ ರಸ್ತೆ, ರಾಮಚಂದ್ರಪುರಂ ರವರಿಗೆ ಪೀಠೋಪಕರಣಗಳನ್ನು ಸರಬರಾಜು ಮಾಡಲು ಆದೇಶ ನೀಡಿದೆ.

ಈ ವೆಚ್ಚವನ್ನು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 4 ಡಿಎಸ್‌ವೈ 2010, ದಿನಾಂಕ 13.5.2010ರಲ್ಲಿ ನೀಡಿರುವ ಆದೇಶದನ್ವಯ ಲೆಕ್ಕ ಶೀರ್ಷಿಕೆ 2052–00–090–0–01–053 (ಪೀಠೋಪಕರಣ ಮತ್ತು ಜೋಡಣೆಗಳ ವೆಚ್ಚಗಳು) ಅಡಿಯಲ್ಲಿ ಭರಿಸಲು ಧನಲಕ್ಷ್ಮಿ ಎಂಟರ್‌ಪ್ರೈಸಸ್ ಕಂಪನಿಗೆ ರೂ. 29055–00 ಗಳ (ಇಪ್ಪತ್ತೊಂಬತ್ತು ಸಾವಿರದ ಐವತ್ತೈದು ರೂ.ಗಳು ಮಾತ್ರ) ಮೊತ್ತವನ್ನು ಸಿಆಸುಇ ಲೆಕ್ಕ ಪತ್ರ ಶಾಖೆಯು ಡಿ.ಸಿ.ಬಿಲ್ ಮೂಲಕ ಬಿಡುಗಡೆ ಮಾಡುವುದು.

ಧನಲಕ್ಷ್ಮಿ ಎಂಟರ್‌ಪ್ರೈಸಸ್ ಕಂಪನಿಯು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆ ಕೂಡಲೇ ಪೀಠೋಪಕರಣಗಳನ್ನು ಸರಬರಾಜು ಮಾಡುವುದು ಹಾಗೂ ಸಿಆಸು ಇಲಾಖೆಯಿಂದ ನೀಡುವ ಮೊತ್ತಕ್ಕೆ ಸ್ವೀಕೃತಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

## ANNEXURE TO G.O. No. KCIT 115 R & I 2010, Dated: 24-07-2010

**Comparative Statement**

| Sl.No. | Particulars | Qty. | G.R. Enterprises | Shri Jaganatha Traders | Dhanalakshmi Enterprises |
|---|---|---|---|---|---|
| 1. | Executive Medium Back Chair (1002) | 01 | 6088-50 | 5351-50 | 4653-00 |
| 2. | Executive visitors Chair V.C.H 1025 | 08 | 20974-80 | 21928-00 | 19068-00 |
| 3. | Table Class 6x3 | 0-1 | 4455-00 | 3915-75 | 3405-00 |

| | | | | | |
|---|---|---|---|---|---|
| 4 | Curtain 5x6 | 01 | 2524-50 | 2218-90 | 1929-00 |
| | Total | | 34042-80 | 33414-15 | 29055-00 |

G.R. Enterprises - 34041-80
Shri Jagannatha Traders - 33414-15
Dhanalakshmi Enterprises - 29055-00

**M.K. Bharmarajappa**
Under Secretary,
Kannada and Culture, Information
and Tourism Department

P.R. 1922

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಶ್ರೀ ಬಿ.ಬಿ. ಓಂಕಾರೇಶ್ವರ, ಔಷಧ ಪರಿವೀಕ್ಷಕರು, ಕೇಂದ್ರ ಕಛೇರಿ ಇವರನ್ನು ಪ್ರಭಾರ ಹುದ್ದೆಯಲ್ಲಿ ಮುಂದುವರೆಸುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಅಧಿಸೂಚನೆ ಸಂ. ಆಕುಕ 46 ಐಎಂಎಂ 2008 ದಿನಾಂಕ 19–12–2008.

(2) ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ ಪತ್ರ ಸಂ. ಔನಿಇ/767/ಸಿಬ್ಬಂದಿ/2009–10, ದಿನಾಂಕ 3–3–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1)ರ ಆದೇಶದಲ್ಲಿ ಶ್ರೀ ಜಿ.ವಿ. ನಾರಾಯಣರೆಡ್ಡಿ ಔಷಧ ಪರಿವೀಕ್ಷಕರು, ಬೆಂಗಳೂರು ವೃತ್ತ–5, ಬೆಂಗಳೂರು ಇವರಿಗೆ ಸಹಾಯಕ ಔಷಧ ನಿಯಂತ್ರಕರ ಹುದ್ದೆಗೆ ಸ್ಥಾನಪನ್ನ ಪದೋನ್ನತಿ ನೀಡಿ ಸಹಾಯಕ ಔಷಧ ನಿಯಂತ್ರಕರು, ಕೋಲಾರ ವೃತ್ತ, ಕೋಲಾರ ಇಲ್ಲಿ ಖಾಲಿಯಿರುವ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿ ನೇಮಿಸಿ ಸರ್ಕಾರ ಆದೇಶ ಹೊರಡಿಸಿದೆ.

ಮೇಲೆ ಓದಲಾದ ಕ್ರ.ಸಂ. (2)ರ ಪತ್ರದಲ್ಲಿ ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರು ಶ್ರೀ ಜಿ.ವಿ. ನಾರಾಯಣರೆಡ್ಡಿ, ಔಷಧ ಪರಿವೀಕ್ಷಕರು, ಬೆಂಗಳೂರು ವೃತ್ತ–5, ಬೆಂಗಳೂರು ಇವರ ಬಡ್ತಿಯಿಂದ ತೆರವಾದ ಔಷಧ ಪರಿವೀಕ್ಷಕರ ಹುದ್ದೆಯ ಪ್ರಭಾರವನ್ನು ದಿನಾಂಕ: 19–12–2009 ರಿಂದ ತಮ್ಮ ಹುದ್ದೆಯ ಕರ್ತವ್ಯಗಳೊಂದಿಗೆ ಹೆಚ್ಚುವರಿಯಾಗಿ ವಹಿಸಿಕೊಂಡು ನಿರ್ವಹಿಸುತ್ತಿರುವ ಶ್ರೀ ಬಿ.ಬಿ. ಓಂಕಾರೇಶ್ವರ, ಔಷಧ ಪರಿವೀಕ್ಷಕರು, ಕೇಂದ್ರ ಕಛೇರಿ, ಬೆಂಗಳೂರು ಇವರಿಗೆ ಹುದ್ದೆಯ ನಿಯಮಾನುಸಾರ ಸದರಿ ಹುದ್ದೆ ಭರ್ತಿಯಾಗುವವರೆಗೆ ಸಮವರ್ತಿ ಪ್ರಭಾರದಲ್ಲಿ ಮುಂದುವರೆಸಲು ಸರ್ಕಾರದ ಆದೇಶವನ್ನು ನೀಡಬೇಕೆಂದು ಪ್ರಸ್ತಾಪಿಸಿರುತ್ತಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 50 ಐಎಂಎಂ 2010, ಬೆಂಗಳೂರು, ದಿನಾಂಕ: 06–2010**

ಪ್ರಸಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಬಿ.ಬಿ. ಓಂಕಾರೇಶ್ವರ, ಔಷಧ ಪರಿವೀಕ್ಷಕರು, ಕೇಂದ್ರ ಕಛೇರಿ, ಬೆಂಗಳೂರು ಇವರನ್ನು ದಿನಾಂಕ: 12–12–2009 ರಿಂದ 01 ವರ್ಷದ ಅವಧಿಗೆ ಅಥವಾ ಬೆಂಗಳೂರು ವೃತ್ತ–5ರಲ್ಲಿ ಖಾಲಿಯಿರುವ ಔಷಧ ಪರಿವೀಕ್ಷಕರ ಹುದ್ದೆಯನ್ನು ತುಂಬುವವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ಹೆಚ್ಚುವರಿ ಪ್ರಭಾರವನ್ನು ಸಮವರ್ತಿಯಾಗಿ ನಿರ್ವಹಿಸಲು ಸರ್ಕಾರದ ಅನುಮತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಇಟಗಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 1923

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಕೆ.ಎಸ್. ನಿಂಗಪ್ಪ ಕೆ.ಎ.ಎಸ್. (ನಿ) ಅಧಿಕಾರಿ ಹಾಗೂ ಶ್ರೀ ಕೆ. ಕಾಮರಾಜ್ ದ್ವಿ.ದ.ಸ. ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ–ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರಿ ಆದೇಶ ಸಂ: ಸಿಆಸುಇ 397 ಎಸ್ಇಎನ್ 06 ದಿ: 25–08–07 ಮತ್ತು ದಿ: 27–10–07.

(2) ವಿಚಾರಣಾಧಿಕಾರಿಗಳ ವರದಿ ದಿ: 06–11–2008

(3) ಸರ್ಕಾರಿ ಆದೇಶ ಸಂ: ಸಿಆಸುಇ 51 ಕೆಇಪಿ 07 ದಿ: 25–02–2010

(4) ಸರ್ಕಾರದ ಪತ್ರ ಸಂ: 22–03–2010 ಮತ್ತು 25–05–2010

(5) ಕಾರ್ಯದರ್ಶಿ ಕರ್ನಾಟಕ ಲೋಕ ಸೇವಾ ಆಯೋಗ ಇವರ ಪತ್ರ ದಿ: 09–7–2010.

**ಪ್ರಸ್ತಾವನೆ :**

ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್.(ನಿ) ಅಧಿಕಾರಿ ಇವರು ತುಮಕೂರು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಹುದ್ದೆಯಲ್ಲಿ ಹಾಗೂ ತುಮಕೂರು ಜಿಲ್ಲಾ ಸಾಕ್ಷರತಾ ಸಮಿತಿ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ತುಮಕೂರು ಜಿಲ್ಲಾ ಸಾಕ್ಷರತಾ ಸಮಿತಿಯಲ್ಲಿ ಪುಸ್ತಕ ಖರೀದಿಯಲ್ಲಿ ನಡೆದಿರುವ ಅವ್ಯವಹಾರದ ಆರೋಪದ ಸಂಬಂಧ ಸದರಿಯವರನ್ನೊಳಗೊಂಡಂತೆ ಶ್ರೀಮತಿ ಬಿ.ಎಚ್. ರಮಾಕುಮಾರಿ, ಹಿಂದಿನ ಪುಸ್ತಕ ಆಯ್ಕೆ ಸಮಿತಿ ಅಧ್ಯಕ್ಷರು ಹಾಗೂ ಪ್ರಥಮ ದರ್ಜೆ ಸಹಾಯಕರು ಉಪ ವಿಭಾಗಾಧಿಕಾರಿ ಕಛೇರಿ ತುಮಕೂರು ಹಾಗೂ ಶ್ರೀ ಕೆ. ಕಾಮರಾಜ್ ನಿವೃತ್ತ ದ್ವಿತೀಯ ದರ್ಜೆ ಸಹಾಯಕರು ಸಾಕ್ಷರತಾ ಸಮಿತಿ ತುಮಕೂರು ಇವರುಗಳ ವಿರುದ್ಧ ವಿಚಾರಣೆ ನಡೆಸಲು ಮೇಲೆ ಕ್ರಮ ಸಂ(1)ರಲ್ಲಿ ಓದಲಾದ ದಿ: 27–10–07 ರ ಆದೇಶದಲ್ಲಿ ರಾಜ್ಯ ಯೋಜನಾ ನಿರ್ದೇಶಕರು (ಭಾಆಸೇ) ಸರ್ವಶಿಕ್ಷಣ ಅಭಿಯಾನ, ಬೆಂಗಳೂರುರವರನ್ನು

ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂ(2) ರಲ್ಲಿ ಓದಲಾದ ದಿ: 06-11-2008 ರ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಸಲ್ಲಿಸಿ ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್. ಅಧಿಕಾರಿ ಹಾಗೂ ಶ್ರೀ ಕೆ. ಕಾಮರಾಜ್ ನಿವೃತ್ತ ದ್ವಿತೀಯ ದರ್ಜೆ ಸಹಾಯಕರು, ಸಾಕ್ಷರತಾ ಸಮಿತಿ ತುಮಕೂರು ಇವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿದೆಯೆಂದು ಹಾಗೂ ಶ್ರೀಮತಿ ಬಿ.ಎಚ್. ರಮಾಕುಮಾರಿ ಹಿಂದಿನ ಪುಸ್ತಕ ಆಯ್ಕೆ ಸಮಿತಿ ಅಧ್ಯಕ್ಷರು ಹಾಗೂ ಪ್ರಥಮ ದರ್ಜೆ ಸಹಾಯಕರು, ಉಪ ವಿಭಾಗಾಧಿಕಾರಿ ಕಛೇರಿ ತುಮಕೂರು ವಿಭಾಗ ತುಮಕೂರು ಇವರ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿಲ್ಲವೆಂದು ವರದಿಯನ್ನು ನೀಡಿರುತ್ತಾರೆ.

ವಿಚಾರಣಾ ವರದಿಯನ್ನು ದಾಖಲೆಗಳೊಂದಿಗೆ ಪರಿಶೀಲಿಸಿ ಶ್ರೀಮತಿ ಬಿ.ಎಚ್. ರಮಾಕುಮಾರಿ ಹಿಂದಿನ ಪುಸ್ತಕ ಆಯ್ಕೆ ಸಮಿತಿ ಅಧ್ಯಕ್ಷರು ಹಾಗೂ ಪ್ರಥಮ ದರ್ಜೆ ಸಹಾಯಕರು ಉಪ ವಿಭಾಗಾಧಿಕಾರಿ ಕಛೇರಿ ತುಮಕೂರು ವಿಭಾಗ ತುಮಕೂರು ಇವರ ವಿರುದ್ಧದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ನೀಡಿರುವ ವರದಿಯ ಹಿನ್ನೆಲೆಯಲ್ಲಿ ಸದರಿಯವರನ್ನು ಮೇಲೆ ಕ್ರ.ಸಂ. (3) ರಲ್ಲಿ ಓದಲಾದ ಆದೇಶದಲ್ಲಿ ಆರೋಪಗಳಿಂದ ಆರೋಪಮುಕ್ತಗೊಳಿಸಿ ಅಂತಿಮ ಆದೇಶ ಹೊರಡಿಸಲಾಗಿದೆ. ವಿಚಾರಣಾ ವರದಿಯಲ್ಲಿ ತಿಳಿಸಿರುವಂತೆ ಜಿಲ್ಲಾ ಸಾಕ್ಷರ ಸಮಿತಿಯ ಅಧ್ಯಕ್ಷರು/ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಶ್ರೀ ಕೆ.ಎಸ್. ನಿಂಗಪ್ಪ ರವರು ಅನುಮೋದನೆ ಪ್ರಾಧಿಕಾರವಾಗಿ ಇಡೀ ಪುಸ್ತಕಗಳ ಆಯ್ಕೆ ಪ್ರಕ್ರಿಯೆಯಲ್ಲಿ ಭಾಗಿಯಾಗಿ ಅಸಮರ್ಪಕ ಕಾರ್ಯವಿಧಾನ ಮತ್ತು ಅಸಮರ್ಪಕ ವೆಚ್ಚಕ್ಕೆ ಕಾರಣರಾಗಿರುತ್ತಾರೆಂದು ಇದು ಅನುಚಿತ ನಡವಳಿಕೆಯಾಗಿದ್ದು, ಇವರ ವಿರುದ್ಧದ ಆರೋಪ ಸಾಬೀತಾಗಿರುತ್ತದೆ. ಹಾಗೆಯೇ ಶ್ರೀ ಕೆ. ಕಾಮರಾಜ್, ದ್ವಿತೀಯ ದರ್ಜೆ ಸಹಾಯಕರು ಸದರಿ ಪ್ರಕ್ರಿಯೆಗೆ ಸೂಕ್ತ ರೀತಿಯಲ್ಲಿ ನಿಯಮಬದ್ಧವಾಗಿ ಕಾರ್ಯನಿರ್ವಹಿಸಲು ಮತ್ತು ಅವರ ಪಾಲಿನ ಹೊಣೆಗಾರಿಕೆ ಮತ್ತು ಜವಾಬ್ದಾರಿಯನ್ನು ನಿರ್ವಹಿಸುವಲ್ಲಿ ವಿಫಲರಾಗಿರುವುದು ಮತ್ತು ಅಸಮರ್ಪಕ ಪ್ರಕ್ರಿಯೆಯಲ್ಲಿ ಭಾಗಿಯಾಗಿರುವುದರಿಂದ ಇವರ ವಿರುದ್ಧದ ಆರೋಪಗಳು ಸಾಬೀತಾಗಿರುತ್ತದೆ ಎಂದು ವಿಚಾರಣಾಧಿಕಾರಿಗಳು ವರದಿ ನೀಡಿದ್ದಾರೆ. ಈ ವರದಿಯನ್ವಯ ಎರಡನೇ ಕಾರಣ ಕೇಳುವ ನೋಟೀಸನ್ನು ಆಪಾದಿತರಿಗೆ ಒದಗಿಸಲಾಗಿತ್ತು. ಅವರ ಅಹವಾಲನ್ನು ಪಡೆದು ಪರಿಶೀಲಿಸಲಾಗಿದೆ. ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್. ರವರು ತಿಳಿಸಿರುವಂತೆ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರಿಗೆ ಇತರ ಅಭಿವೃದ್ಧಿ ಇಲಾಖೆಗಳ ಅಂದರೆ ಗ್ರಾಮೀಣಾಭಿವೃದ್ಧಿ, ಆರೋಗ್ಯ, ಶಿಕ್ಷಣ, ಕೃಷಿ ಮುಂತಾದ ಇಲಾಖೆಗಳ ಕಾರ್ಯವೂ ಹೆಚ್ಚಾಗಿ ಇರುತ್ತದೆ. ಪ್ರಸ್ತುತ ಪ್ರಕರಣದಲ್ಲಿ ಪುಸ್ತಕ ಆಯ್ಕೆ ಪೂರ್ಣ ಜವಾಬ್ದಾರಿಯು ಆಯ್ಕೆ ಸಮಿತಿಯ ಮೇಲಿರುತ್ತದೆ. ಅಂದರೆ ಪುಸ್ತಕಗಳನ್ನು ಆಯ್ಕೆ ಮಾಡುವ ಸಮಯದಲ್ಲಿ ಈ ಪುಸ್ತಕಗಳು ಯಾರಿಗಾಗಿ ಹಾಗೂ ಯಾವ ಉದ್ದೇಶಕ್ಕಾಗಿ ಎಂಬುದನ್ನು ಗಮನದಲ್ಲಿಡಬೇಕಾಗುತ್ತದೆ. ಈ ಪುಸ್ತಕಗಳ ಪರಿಷ್ಕರಣೆಗೆ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಸೂಚನೆ ನೀಡಿದ ಸಂದರ್ಭದಲ್ಲಿ ಪುಸ್ತಕ ಆಯ್ಕೆ ಸಮಿತಿ ಅಧ್ಯಕ್ಷರು ಹಾಗೂ ಸದಸ್ಯ ಕಾರ್ಯದರ್ಶಿಗಳಾದ ಜಿಲ್ಲಾ ವಯಸ್ಕರ ಶಿಕ್ಷಣಾಧಿಕಾರಿ ಇವರು ನಿಯಮಾನುಸಾರ ಕ್ರಮ ತೆಗೆದುಕೊಂಡು ಅನುಮೋದನೆಗೆ ಮಂಡಿಸುವುದು ಅವಶ್ಯವಿರುತ್ತದೆ. ಈ ಪ್ರಕರಣದಲ್ಲಿ ಆಗಿರುವ ಲೋಪದೋಷಗಳಿಗೆ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳನ್ನು ಜವಾಬ್ದಾರರನ್ನಾಗಿ ಮಾಡುವುದು ಅಷ್ಟೊಂದು ಸಮಂಜಸವೆಂದು ಕಂಡುಬರುವುದಿಲ್ಲ ಒಟ್ಟು ಆಯ್ಕೆ ಮಾಡಿರುವ ಪುಸ್ತಕಗಳನ್ನು ಖರೀದಿ ಮಾಡಿ ಪ್ರಕಾಶಕರುಗಳಿಗೆ ಹಣ ಸಂದಾಯ ಮಾಡಿರುವುದರಲ್ಲಿ ಯಾವುದೇ ಹಣದ ದುರ್ವ್ಯವಹಾರ ಕಂಡು ಬರುವುದಿಲ್ಲ. ಈ ಲೋಪಗಳಿಗೆ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳನ್ನು ಜವಾಬ್ದಾರರನ್ನಾಗಿ ಮಾಡುವುದು ಅಷ್ಟೊಂದು ಸಮಂಜಸವಲ್ಲವೆಂದು ಲಿಖಿತ ವರದಿ ನೀಡಿರುತ್ತಾರೆ. ಹಾಗೆಯೇ ಈ ಪ್ರಕರಣದಲ್ಲಿ ಆರೋಪಿತರಾಗಿರುವ ಶ್ರೀ ಕೆ. ಕಾಮರಾಜ್. ದ್ವಿ.ದ.ಸ. ಇವರು ಮೇಲಾಧಿಕಾರಿಗಳ ಸೂಚನೆಯನ್ನು ಪರಿಶೀಲಿಸಿರುತ್ತಾರೆ ಹೊರತು ಪುಸ್ತಕಗಳ ಆಯ್ಕೆ ಪ್ರಕ್ರಿಯೆಯಲ್ಲಾಗಲಿ ಅಥವಾ ಪರಿಷ್ಕರಣೆಯಲ್ಲಾಗಲಿ ಇವರ ಪಾತ್ರ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಆರೋಪಿತ ಅಧಿಕಾರಿ/ನೌಕರರು ಸಲ್ಲಿಸಿದ ಲಿಖಿತ ಅಹವಾಲಿನಲ್ಲಿ ಆರೋಪಮುಕ್ತಗೊಳಿಸಲು ಪರಿಗಣಿಸುವಂತಹ ಯಾವುದೇ ಅಂಶಗಳು ಕಂಡುಬಂದಿಲ್ಲದಿರುವುದರಿಂದ ಆಪಾದಿತರು ವಿಚಾರಣಾ ವರದಿಯನ್ನು ಔಪಚಾರಿಕವಾಗಿ ವಿರೋಧಿಸುತ್ತಿದ್ದಾರೆಂದು ಸರ್ಕಾರವು ನಿರ್ಣಯಿಸಿದೆ.

ಆರೋಪಿತರಾದ ಶ್ರೀ ಕೆ.ಎಸ್. ನಿಂಗಪ್ಪ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಹಾಗೂ ಶ್ರೀ ಕೆ. ಕಾಮರಾಜ್, ನಿವೃತ್ತ ದ್ವಿ.ದ.ಸ. ಜಿಲ್ಲಾ ಸಾಕ್ಷರತಾ ಸಮಿತಿ ತುಮಕೂರು ಇವರುಗಳ ವಿರುದ್ಧದ ಆರೋಪಗಳು ಸಾಬೀತಾಗಿರುವ ಹಿನ್ನೆಲೆಯಲ್ಲಿ ಶ್ರೀ ಕೆ.ಎಸ್. ನಿಂಗಪ್ಪ, ನಿವೃತ್ತ ಕೆ.ಎ.ಎಸ್ ಅಧಿಕಾರಿ ಇವರ ನಿವೃತ್ತಿ ವೇತನದ ಶೇ.10 ರಷ್ಟು ಹಣವನ್ನು 2 ವರ್ಷಗಳ ಅವಧಿಗೆ ಕಡಿತಗೊಳಿಸಲು ಹಾಗೂ ಶ್ರೀ ಕೆ. ಕಾಮರಾಜ್, ದ್ವಿ.ದ.ಸ.(ನಿ) ಇವರ ನಿವೃತ್ತಿ ವೇತನದಲ್ಲಿ ಶೇ. 5 ರಷ್ಟು ಹಣವನ್ನು 2 ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಲು ಸರ್ಕಾರವು ನಿರ್ಧರಿಸಿದ್ದು, ಅದರಂತೆ ದಂಡನೆ ವಿಧಿಸುವ ಈ ಪ್ರಸ್ತಾವನೆಗೆ ಕರ್ನಾಟಕ ಲೋಕ ಸೇವಾ ಆಯೋಗವು ಮೇಲೆ ಓದಲಾದ ಕ್ರಮ ಸಂ: (4) ರ ಪತ್ರದಲ್ಲಿ ಸಹಮತಿ ನೀಡಿರುತ್ತದೆ ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 397 ಎಸ್ಇಎನ್ 2006 (ಸಿಆಸುಇ 51 ಕೆಇವಿ 2008), ಬೆಂಗಳೂರು, ದಿನಾಂಕ: 21ನೇ ಜುಲೈ 2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಶ್ರೀ ಕೆ.ಎಸ್. ನಿಂಗಪ್ಪ ನಿವೃತ್ತ ಕೆ.ಎ.ಎಸ್. ಅಧಿಕಾರಿ ಶ್ರೀ ಕೆ. ಕಾಮರಾಜ್, ದ್ವಿ.ದ.ಸ (ನಿ) ಇವರುಗಳಿಗೆ ಈ ಕೆಳಕಂಡ ದಂಡನೆಯನ್ನು ವಿಧಿಸಿದೆ.

| ಕ್ರಮ ಸಂ. | ಅಧಿಕಾರಿ/ನೌಕರರ ಹೆಸರು | ದಂಡನೆ |
|---|---|---|
| 1. | ಶ್ರೀ ಕೆ.ಎಸ್. ನಿಂಗಪ್ಪ<br>ಕೆ.ಎ.ಎಸ್. (ನಿ) | ಇವರ ನಿವೃತ್ತಿ ವೇತನದ ಶೇಕಡ 10 ರಷ್ಟು 2 (ಎರಡು) ವರ್ಷಗಳ ಅವಧಿಗೆ ಕಡಿತಗೊಳಿಸುವುದು |
| 2. | ಶ್ರೀ ಕೆ. ಕಾಮರಾಜ್,<br>ದ್ವಿ.ದ.ಸ. (ನಿ) | ಅವರ ನಿವೃತ್ತಿ ವೇತನದಲ್ಲಿ ಶೇ 5 ರಷ್ಟು 2 (ಎರಡು) ವರ್ಷಗಳ ಅವಧಿಗೆ ಕಡಿತಗೊಳಿಸುವುದು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1924

**ಎಂ. ವಾಸುದೇವಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು-2)

## ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಹುಡ್ಕೋದಿಂದ ಪಡೆದ ಸಾಲಕ್ಕೆ 2010ರ ಜೂನ್ ತಿಂಗಳಿಗೆ ತ್ರೈಮಾಸಿಕ ಅಸಲು ಮತ್ತು ಬಡ್ಡಿ ಬಿಡುಗಡೆ ಬಗ್ಗೆ.

**ಓದಲಾಗಿದೆ :** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಪತ್ರ ಸಂಖ್ಯೆ. ಕೆಆರ್‌ಡಿಸಿಎಲ್/ಎಂ.ಡಿ./2010–11/0656 ದಿನಾಂಕ 24–06–2010.

**ಪ್ರಸ್ತಾವನೆ :**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತವು ಕೈಗೊಳ್ಳುತ್ತಿರುವ ಯೋಜನೆಗಳಿಗಾಗಿ ವಿವಿಧ ಸ್ಕೀಂಗಳ ಅಡಿಯಲ್ಲಿ ಹುಡ್ಕೋದಿಂದ ಪಡೆದ ಸಾಲವು ಈವರೆಗೆ ಒಟ್ಟು 3906594420/–ರೂ.ಗಳು ದಿನಾಂಕ 31–06–2010ರ ಅಂತ್ಯಕ್ಕೆ ಬಾಕಿ ಇರುತ್ತದೆ. ಓದಲಾದ ದಿನಾಂಕ 24–06–2010ರ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರದಲ್ಲಿ, 2010ರ ಜೂನ್ ತಿಂಗಳಿಗೆ ಕೊನೆಗೊಳ್ಳುವ ತ್ರೈಮಾಸಿಕಕ್ಕೆ ಮೇಲಿನ ಸಾಲದ ಮರುಪಾವತಿಗೆ ಅಸಲು ಹಾಗೂ ಅಡ್ಡಿ ಅನುಕ್ರಮವಾಗಿ 141499000/– ರೂ.ಗಳು ಮತ್ತು 83548465/– ರೂ.ಗಳು ಒಟ್ಟು ಮೊತ್ತ 225047465/– ರೂ.ಗಳನ್ನು ಹುಡ್ಕೋಗೆ ಪಾವತಿಸಬೇಕಾಗಿದೆಯೆಂದು ವರದಿ ಮಾಡಲಾಗಿದೆ. 123010/– ರೂ.ಗಳನ್ನು ಮರುಹೊಂದಾಣಿಕೆ ಮಾಡಿದ್ದು, ಒಟ್ಟು ಈಗ ಬಾಕಿ ಇರುವ ಮೊತ್ತ 224924455/– ರೂ.ಗಳನ್ನು ಬಿಡುಗಡೆ ಮಾಡಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 11 ಇಎಪಿ 2010, ಬೆಂಗಳೂರು, ದಿನಾಂಕ: 21–07–2010**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತವು ಹುಡ್ಕೋದಿಂದ ಪಡೆದುಕೊಂಡಿರುವ ಸಾಲದ ಬಾಬ್ತಿಗೆ 2010ರ ಜೂನ್ ತಿಂಗಳಿಗೆ ಕೊನೆಗೊಳ್ಳುವ ತ್ರೈಮಾಸಿಕ ಅವಧಿಗೆ ಅಸಲು ಹಾಗೂ ಬಡ್ಡಿ ಸೇರಿ ಒಟ್ಟು 224924455/– ರೂ.ಗಳನ್ನು (ಇಪ್ಪತ್ತೆರಡು ಕೋಟಿ ನಲವತ್ತೊಂಬತ್ತು ಲಕ್ಷದ ಇಪ್ಪತ್ತಾನಾಲ್ಕು ಸಾವಿರದ ನಾಲ್ಕು ನೂರ ಐವತ್ತೈದು ರೂಪಾಯಿಗಳು ಮಾತ್ರ) ಲೆಕ್ಕಶೀರ್ಷಿಕೆ "5054–80–190–0–01–240 (ಯೋಜನೇತರ) ಸಾಲ ಮೇಲುಸ್ತುವಾರಿ" ಅಡಿಯಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಲು ಆದೇಶಿಸಲಾಗಿದೆ.

ಸದರಿ ಬಿಲ್ಲಿನ ಮೊತ್ತಕ್ಕೆ ನಿರ್ದೇಶಕರು (ಆರ್ಥಿಕ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ ಇವರ ಮೇಲುರುಜು ಮಾಡಿಸುವುದು ಹಾಗೂ ಈ ಬಿಲ್ಲನ್ನು (ಸ್ವೀಕೃತದ ರಶೀದಿ) ರಾಜ್ಯ ಹುಜೂರ್ ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ. ಲೋಇ 526 ಆಕೋ–1/10 ದಿನಾಂಕ 14–07–2010 ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1925

**ಎಂ. ದೇವಿಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಹಾಗೂ
ಒಳನಾಡು ಜಲಸಾರಿಗೆ ಇಲಾಖೆ. (ಇಎಪಿ)

## ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** 2010–11ನೇ ಸಾಲಿನಲ್ಲಿ ಪ್ರಧಾನ ಲೆಕ್ಕಶೀರ್ಷಿಕೆ 5054 ರ ಅಡಿಯಲ್ಲಿ ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ :** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಪತ್ರ ಸಂಖ್ಯೆ. ಕರಅನಿನಿ/ವ್ಯ.ನಿ/2010–11/753 ದಿ: 07–07–2010.

**ಪ್ರಸ್ತಾವನೆ :**

2010–11ನೇ ಸಾಲಿಗೆ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಲೆಕ್ಕಶೀರ್ಷಿಕೆ 5054–80–190–0–01–132 (ಯೋಜನೆ) ಅಡಿಯಲ್ಲಿ ಬಂಡವಾಳ ಕಾಮಗಾರಿಗಳಿಗಾಗಿ ರೂ. 200.00 ಕೋಟಿಗಳನ್ನು ಒದಗಿಸಲಾಗಿದ್ದು, ದಿನಾಂಕ 20–04–2010 ರಂದು ಆನ್ಯೂಟಿ ಮೊತ್ತವಾದ ರೂ. 29.70 ಕೋಟಿಗಳನ್ನು ಸದರಿ ಲೆಕ್ಕಶೀರ್ಷಿಕೆ ಅಡಿಯಲ್ಲಿ ಬಿಡುಗಡೆ ಮಾಡಲಾಗಿದೆ.

ಸದರಿ ಲೆಕ್ಕ ಶೀರ್ಷಿಕೆಗಳ ಅಡಿಯಲ್ಲಿ ರಸ್ತೆ ಮತ್ತು ಸೇತುವೆ ಕಾಮಗಾರಿಗಳಿಗೆ ಬಾಕಿ ಇರುವ ಬಿಲ್ಲುಗಳನ್ನು ಪಾವತಿಸಲು ಉಳಿದ 170.30 ಕೋಟಿಗಳಲ್ಲಿ ರೂ. 100.00 ಕೋಟಿಗಳನ್ನು ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಉಲ್ಲೇಖಿತ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಪತ್ರದಲ್ಲಿ ಕೋರಲಾಗಿದೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 97 ಇಎಪಿ 2010, ಬೆಂಗಳೂರು, ದಿನಾಂಕ: 21–07–2010**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದಿಂದ ಕೈಗೊಂಡು ಪ್ರಗತಿಯಲ್ಲಿರುವ ಕಾಮಗಾರಿಗಳ ಬಾಕಿ ಬಿಲ್ಲುಗಳ ಪಾವತಿಗಾಗಿ 2010–11ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 5054–80–190–0–01–132 ಬಂಡವಾಳ ವೆಚ್ಚಗಳು (ಯೋಜನೆ) ಯಡಿಯಲ್ಲಿ ರೂ. 45.00 ಕೋಟಿಗಳನ್ನು (ನಲವತ್ತೈದು ಕೋಟಿ ರೂಪಾಯಿಗಳು ಮಾತ್ರ) ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಲಾಗಿದೆ.

ಮುಂದುವರೆದು, ನಿಗಮವು 45.00 ಕೋಟಿ ರೂ.ಗಳನ್ನು (ನಲವತ್ತೈದು ಕೋಟಿ ರೂಪಾಯಿಗಳು ಮಾತ್ರ) ಬಿಲ್ಲನ್ನು ಕೆ.ಎಫ್.ಸಿ. 17(ಸಿ)4 ರಲ್ಲಿನಂತೆ ಮಹಾಲೇಖಪಾಲರಿಂದ (ಎ ಅಂಡ್ ಇ) ಅಥರೈಸೇಷನ್ ಇಲ್ಲದೆಯೇ ಮನ್ನಣೆ ಮಾಡುವುದು; ಹಾಗೂ ಸದರಿ ಬಿಲ್ಲಿನ ಮೊತ್ತಕ್ಕೆ ನಿರ್ದೇಶಕರು

(ಆರ್ಥಿಕ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ ಇವರ ಮೇಲುರುಜು ಮಾಡಿಸಿ, ಈ ಬಿಲ್ಲನ್ನು (ಸ್ವೀಕೃತದ ರಶೀತಿ) ರಾಜ್ಯ ಹುಜುರು ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ, ಲೋಇ 531 ಆಕೋ–1/10 ದಿನಾಂಕ 15–07–2010 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1926

**ಎಂ. ದೇವಿಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಹಾಗೂ
ಒಳನಾಡು ಜಲಸಾರಿಗೆ ಇಲಾಖೆ. (ಇಎಪಿ)

## ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಬೆಂಗಳೂರು ಶೇಷಾದ್ರಿ ರಸ್ತೆಯಲ್ಲಿರುವ ಕಾಲೇಜು ಶಿಕ್ಷಣ ಇಲಾಖೆ ಆಯುಕ್ತರ ಕಛೇರಿ ಕಟ್ಟಡದ (1ನೇ ಹಂತ) ನಿರ್ಮಾಣ ಕಾಮಗಾರಿಯ ಗುತ್ತಿಗೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಪತ್ರ ಸಂಖ್ಯೆ.: ಸಂಕದ:ಕನಿಶಾ:ಎಇ–5:2009–10, ದಿನಾಂಕ: 03.03.2010.

**ಪ್ರಸ್ತಾವನೆ :**

ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ತಮ್ಮ ಪತ್ರದಲ್ಲಿ ಬೆಂಗಳೂರು ಶೇಷಾದ್ರಿ ರಸ್ತೆಯಲ್ಲಿರುವ ಕಾಲೇಜು ಶಿಕ್ಷಣ ಇಲಾಖೆ ಆಯುಕ್ತರ ಕಛೇರಿ ಕಟ್ಟಡದ (1ನೇ ಹಂತ) ನಿರ್ಮಾಣ ಕಾಮಗಾರಿಯನ್ನು ಟೆಂಡರ್ ಆಧಾರದಲ್ಲಿ 2007–08ನೇ ಸಾಲಿನ ದರಪಟ್ಟಿಯ ಮೇಲೆ ಹೆಚ್ಚುವರಿ ಶೇ. 23.28ರಂತೆ ಗುತ್ತಿಗೆದಾರರಾದ ಶ್ರೀ ಕೆ. ದಾಮೋದರ್ ರವರಿಗೆ ವಹಿಸಿಕೊಡಲಾಗಿತ್ತು. ಗುತ್ತಿಗೆ ಕರಾರಿನಂತೆ ಗುತ್ತಿಗೆದಾರರು ದಿನಾಂಕ: 3.9.2007ರಂದು ಕಾಮಗಾರಿಯನ್ನು ಪ್ರಾರಂಭಿಸಿ ದಿನಾಂಕ: 2.9.2008ರಂದು ಪೂರ್ಣಗೊಳಿಸಬೇಕಾಗಿತ್ತು. ಆದರೆ, ಈ ಮಧ್ಯೆ ಕಾಲೇಜು ಶಿಕ್ಷಣ ಇಲಾಖೆಯು ಸದರಿ ಕಟ್ಟಡದ ಕಾಮಗಾರಿಯನ್ನು ಕೈಗೊಳ್ಳಲು ಬೇರೆ ಇಲಾಖೆಗೆ ವಹಿಸಿಕೊಟ್ಟಿರುವುದರಿಂದ ಗುತ್ತಿಗೆದಾರರಾದ ಶ್ರೀ ಕೆ. ದಾಮೋದರ್ ರವರು ಯಾವುದೇ ಕಾಮಗಾರಿಯನ್ನು ನಿರ್ವಹಿಸದೇ ಇರುವುದರಿಂದ ಅವರಿಗೆ ನೀಡಿರುವ ಗುತ್ತಿಗೆಯನ್ನು ದಂಡರಹಿತವಾಗಿ ರದ್ದುಪಡಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 66 ಬಿಇಡಿ 2008, ಬೆಂಗಳೂರು, ದಿನಾಂಕ: 23.07.2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಬೆಂಗಳೂರು ಶೇಷಾದ್ರಿ ರಸ್ತೆಯಲ್ಲಿರುವ ಕಾಲೇಜು ಶಿಕ್ಷಣ ಇಲಾಖೆಯ ಆಯುಕ್ತರ ಕಛೇರಿ ಕಟ್ಟಡ (1ನೇ ಹಂತ) ನಿರ್ಮಾಣ ಮಾಡಲು ಶ್ರೀ ಕೆ. ದಾಮೋದರ್, ಗುತ್ತಿಗೆದಾರರು ಇವರಿಗೆ ವಹಿಸಲಾಗಿದ್ದ ಗುತ್ತಿಗೆಯನ್ನು ತಕ್ಷಣವೇ ಜಾರಿಗೆ ಬರುವಂತೆ ದಂಡರಹಿತವಾಗಿ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1927

**ಕೆ. ರೆಹಮತ್ ಉಲ್ಲಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಹಾಗೂ
ಒಳನಾಡು ಜಲಸಾರಿಗೆ ಇಲಾಖೆ. (ಕಟ್ಟಡಗಳು)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಕರ್ನಾಟಕ ಪೌರಾಡಳಿತ ಸೇವಾ ಅಧಿಕಾರಿಗಳ ಮತ್ತು ಪೌರ ಸೇವಾ ವೃಂದದ ನೌಕರರ ರಹಸ್ಯ ವರದಿಗಳನ್ನು ಬರೆಯುವ ಪ್ರಾಧಿಕಾರಗಳನ್ನು ಗೊತ್ತುಪಡಿಸುವ ಬಗ್ಗೆ.

**ಓದಲಾಗಿದೆ :**
(1) ಸರ್ಕಾರದ ಆದೇಶ ಸಂಖ್ಯೆ:ನಅಇ 34 ಇಎಂಸಿ 2003, ದಿನಾಂಕ: 15–12–2003.
(2) ಸರ್ಕಾರದ ಆದೇಶ ಸಂಖ್ಯೆ: ನಅಇ 34 ಇಎಂಸಿ 2003(ಭಾ), ದಿನಾಂಕ: 29–4–2005.
(3) ಸರ್ಕಾರದ ಸುತ್ತೋಲೆ ಸಂಖ್ಯೆ:ನಅಇ 334 ಬೇಮಪ್ರಾ 2006, ದಿನಾಂಕ: 14–2–2007.
(4) ಪೌರಾಡಳಿತ ನಿರ್ದೇಶಕರ ಏಕ ಕಡತ ಸಂಖ್ಯೆ:ಪೌನಿ:ಸಿಬ್ಬಂದಿ:ಕೆಎಂಎಎಸ್:ಸಿಆರ್:12/2010–11.

**ಪ್ರಸ್ತಾವನೆ :**

ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಕರ್ತವ್ಯ ನಿರ್ವಹಿಸುವ ಕರ್ನಾಟಕ ಪೌರಾಡಳಿತ ಸೇವಾ ಅಧಿಕಾರಿಗಳು ಹಾಗೂ ಪೌರ ನೌಕರರ ಮತ್ತು ರಾಜ್ಯದ ಜಿಲ್ಲಾ ನಗರಾಭಿವೃದ್ಧಿ ಕೋಶಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ/ನೌಕರರ ಹಾಗೂ ನಗರಾಭಿವೃದ್ಧಿ ಪ್ರಾಧಿಕಾರಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಆಧಿಕಾರಿಗಳ ವಾರ್ಷಿಕ ಕಾರ್ಯ ನಿರ್ವಹಣಾ ವರದಿಗಳನ್ನು ಬರೆಯುವ ಸಂಬಂಧ ವರದಿ ಮಾಡುವ ಪ್ರಾಧಿಕಾರ, ಪರಿಶೀಲನಾ ಪ್ರಾಧಿಕಾರ ಹಾಗೂ ಅಂಗೀಕರಿಸುವ ಪ್ರಾಧಿಕಾರವನ್ನು ಮೇಲೆ ಓದಲಾದ ಕ್ರ.ಸಂ: (1) ರಿಂದ (3)ರಲ್ಲಿನ ಆದೇಶಗಳಲ್ಲಿ ಗುರುತಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ (4) ರ ಏಕ ಕಡತದಲ್ಲಿ ಪೌರಾಡಳಿತ ನಿರ್ದೇಶಕರು ಜಿಲ್ಲಾ ನಗರಾಭಿವೃದ್ಧಿ ಕೋಶಗಳಲ್ಲಿ ಕರ್ತವ್ಯ ನಿರ್ವಹಿಸುವ ಅಧಿಕಾರಿ/ನೌಕರರುಗಳು ನಗರಸಭೆ/ಪುರಸಭೆ/ ಪಟ್ಟಣ ಪಂಚಾಯತಿಗಳಲ್ಲಿ ಕರ್ತವ್ಯ ನಿರ್ವಹಿಸುವ ಕೆ.ಎಂ.ಎ.ಎಸ್. ಅಧಿಕಾರಿಗಳು, ನಗರಾಭಿವೃದ್ಧಿ ಪ್ರಾಧಿಕಾರಗಳಲ್ಲಿ ಆಯುಕ್ತರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುವ ಕೆಎಂಎಎಸ್ ಅಧಿಕಾರಿಗಳ ಹಾಗೂ ರಾಜ್ಯದ ನಗರಸಭೆ/ಪುರಸಭೆ/ಪಟ್ಟಣ

ಪಂಚಾಯತಿಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಪೌರ ಸೇವಾ ವೃಂದದ 'ಬಿ' ಮತ್ತು 'ಸಿ' ಗುಂಪಿನ ಅಧಿಕಾರಿ/ ಸಿಬ್ಬಂದಿಗಳ ರಹಸ್ಯ ವರದಿಗಳನ್ನು ಬರೆಯುವ ಪ್ರಾಧಿಕಾರಗಳನ್ನು ಗುರುತಿಸಿ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸರ್ಕಾರವು ಪೌರಾಡಳಿತ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 161 ಇಎಂಸಿ 2010, ಬೆಂಗಳೂರು, ದಿನಾಂಕ: 22–07–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಜಿಲ್ಲಾ ನಗರಾಭಿವೃದ್ಧಿ ಕೋಶಗಳಲ್ಲಿ ಕರ್ತವ್ಯ ನಿರ್ವಹಿಸುವ ಅಧಿಕಾರಿ/ನೌಕರರುಗಳು, ನಗರಸಭೆ/ಪುರಸಭೆ/ಪಟ್ಟಣ ಪಂಚಾಯತಿಗಳಲ್ಲಿ ಕರ್ತವ್ಯ ನಿರ್ವಹಿಸುವ ಕೆ.ಎಂ.ಎ.ಎಸ್. ಅಧಿಕಾರಿಗಳು, ನಗರಾಭಿವೃದ್ಧಿ ಪ್ರಾಧಿಕಾರಗಳಲ್ಲಿ ಆಯುಕ್ತರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುವ ಕೆಎಂಎಎಸ್ ಅಧಿಕಾರಿಗಳ ಹಾಗೂ ರಾಜ್ಯದ ನಗರಸಭೆ/ಪುರಸಭೆ/ಪಟ್ಟಣ ಪಂಚಾಯತಿಗಳಲ್ಲಿ ಕರ್ತವ್ಯ ನಿರ್ವಹಿಸುವತ್ತಿರುವ ಪೌರ ಸೇವಾ ವೃಂದದ 'ಬಿ' ಮತ್ತು 'ಸಿ' ಗುಂಪಿನ ಅಧಿಕಾರಿ/ಸಿಬ್ಬಂದಿಗಳ ರಹಸ್ಯ ವರದಿಗಳನ್ನು ಬರೆಯುವ ಸಂಬಂಧ ವರದಿ ಮಾಡುವ ಪ್ರಾಧಿಕಾರ, ಪರಿಶೀಲನಾ ಪ್ರಾಧಿಕಾರ ಹಾಗೂ ಅಂಗೀಕರಿಸುವ ಪ್ರಾಧಿಕಾರಗಳನ್ನು ಈ ಆದೇಶದ ಅನುಬಂಧದಲ್ಲಿರುವಂತೆ ಗೊತ್ತುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1928

**ಸಿ.ಆರ್. ರವೀಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ :** ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಚುಂಚನಕಟ್ಟೆ, ಕೆ.ಆರ್.ನಗರ, ಮೈಸೂರು ಜಿಲ್ಲೆ ಇದರ 2008–09ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ಮುಂದೂಡಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ:ಡಿಎಸ್‌ಕೆ/ಇಎಸ್‌ಟಿಎಸ್/ ಎಜಿಎಂ/365/2009–10 ದಿನಾಂಕ: 22–03–2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ: 22–03–2010ರ ಪತ್ರದಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಇವರು ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಯ ವ್ಯವಸ್ಥಾಪಕ ನಿರ್ದೇಶಕರು, ಕೋರಿರುವಂತೆ ಕಾರ್ಖಾನೆ ಮತ್ತು ಗುತ್ತಿಗೆದಾರರ ನಡುವೆ ಏರ್ಪಟ್ಟಿರುವ ಗುತ್ತಿಗೆ ಕರಾರು ಪತ್ರವು ಇನ್ನೂ ನೊಂದಣಿಯಾಗಿರುವುದಿಲ್ಲ ಮತ್ತು 2009–10 ನೇ ಹಂಗಾಮಿನ ಬಾಡಿಗೆ ಹಣ ರೂ. 677.00 ಲಕ್ಷಗಳು ಪಾವತಿಗೆ ಬಾಕಿ ಇರುವುದರಿಂದ ಈ ಬಗ್ಗೆ ಕ್ರಮವಿಡಲು ದಿನಾಂಕ: 29–11–2008ರ ಮಹಾಸಭೆಯಲ್ಲಿ ನಿರ್ಣಯವಾಗಿದ್ದು, ಇನ್ನೂ ಕಾರ್ಯರೂಪಕ್ಕೆ ಬಾರದಿರುವುದರಿಂದ ಈ ಎರಡು ವಿಚಾರಗಳ ಬಗ್ಗೆ ಮಹಾಸಭೆಯಲ್ಲಿ ಮಾಹಿತಿ ನೀಡುವುದು ತುಂಬಾ ಜಟಿಲ ಸಮಸ್ಯೆಯಾಗುತ್ತದೆಂದೂ ಹಾಗೂ 2008–09ನೇ ಸಾಲಿನ ಆಡಿಟ್ ವರದಿ ಇನ್ನೂ ಬಿಡುಗಡೆಯಾಗಿರುವುದಿಲ್ಲವೆಂದೂ ಮತ್ತು ಮಹಾಸಭೆಯ ಏರ್ಪಾಡಿಗೆ ರೂ. 5.00 ಲಕ್ಷಗಳು ಖರ್ಚಾಗಲಿದ್ದು, ಈ ಹಣವನ್ನು ರಾಜ್ಯಮಟ್ಟದ ಸಲಹಾ ಸಮಿತಿ ಸಭೆಯಲ್ಲಿ ಹಂಚಿಕೆ ಮಾಡಿಸಿಕೊಳ್ಳಬೇಕಿರುತ್ತದೆಂದು ವರದಿ ಮಾಡಿರುವುದರಿಂದ, ಕಾರ್ಖಾನೆಯ 2008–09ನೇ ಸಾಲಿನ ಮಹಾಸಭೆಯನ್ನು 2010ನೇ ಸಾಲಿನ ಸೆಪ್ಟೆಂಬರ್ ಮಾಹೆಯಲ್ಲಿ ನಡೆಸಲು ಸರ್ಕಾರವನ್ನು ಕೋರಿ ವಿಶೇಷಾಧಿಕಾರಿಗಳು ಹಾಗೂ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ದಿನಾಂಕ 18–01–2010 ರಂದು ನಡೆದು ಸಭೆಯಲ್ಲಿ ನಿರ್ಣಯಿಸಿರುವ ಹಿನ್ನೆಲೆಯಲ್ಲಿ ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಚುಂಚನಕಟ್ಟೆ, ಕೆ.ಆರ್.ನಗರ ತಾಲ್ಲೂಕು, ಮೈಸೂರು ಜಿಲ್ಲೆ ಇದರ 2008–09ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 121ರ ಅಡಿಯಲ್ಲಿ ದಿನಾಂಕ 30–09–2010 ರೊಳಗಾಗಿ ಜರುಗಿಸಲು ಸರ್ಕಾರದ ಅನುಮತಿ ನೀಡಬಹುದೆಂದು ಕಬ್ಬು ಅಭಿವೃದ್ಧಿ ಆಯುಕ್ತರು ಅಭಿಪ್ರಾಯಪಟ್ಟಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 08 ಸಸಕಾ 2010, ಬೆಂಗಳೂರು, ದಿನಾಂಕ: 21–07–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 121ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಚುಂಚನಕಟ್ಟೆ, ಕೆ.ಆರ್.ನಗರ ತಾಲ್ಲೂಕು, ಮೈಸೂರು ಜಿಲ್ಲೆ ಇದರ 2008–09ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ದಿನಾಂಕ: 30–09–2010 ರೊಳಗೆ ನಡೆಸಲು ಕಾಲಾವಕಾಶವನ್ನು ವಿಸ್ತರಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 27(1)ರ ಉಪಬಂಧಗಳನ್ನು ಮಾರ್ಪಡಿಸಿ ಅನುಮತಿ ನೀಡಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 27(1)ರ ಉಪಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30–09–2010ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ರ ಕಲಂನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1929

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

## ಕಾರ್ಮಿಕ ಸಚಿವಾಲಯ

**ವಿಷಯ :** 2007–08ನೇ ಸಾಲಿನಲ್ಲಿ ರಾಜ್ಯದ ಅತಿ ಹೆಚ್ಚು ಹಿಂದುಳಿದ ತಾಲ್ಲೂಕುಗಳಲ್ಲಿ ಸ್ಥಾಪಿಸಲಾದ 08 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಎಂ.ಆರ್.ಎ.ಸಿ. ವೃತ್ತಿಯನ್ನು ಪ್ರಾರಂಭಿಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ ಕಾಇ 141 ಇಟಿಐ 2007, ದಿ: 02–08–2007.

2) ಸರ್ಕಾರಿ ಆದೇಶ ಸಂ: ಕಾಇ 376 ಇಟಿಐ 2007 (ಭಾಗ) ದಿ: 5–11–2007

3) ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂಖ್ಯೆ, ಉತನಿ/ತರಬೇತಿ/ಯೋಜನೆ–1/ವಿವ–11/2007–08 ದಿನಾಂಕ 08–03–2010

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2007–08ನೇ ಸಾಲಿನಲ್ಲಿ ರಾಜ್ಯದ ಹಿಂದುಳಿದ ತಾಲ್ಲೂಕುಗಳ ಪೈಕಿ 08 ತಾಲ್ಲೂಕುಗಳಾದ ಅಫ್ಜಲ್‌ಪುರ, ಹಿರಿಯೂರು, ಮುಳಬಾಗಿಲು, ದೇವದುರ್ಗ, ನಾಗಮಂಗಲ, ಬೇಲೂರು, ಶ್ರೀರಂಗಪಟ್ಟಣ ಮತ್ತು ಬಸವಕಲ್ಯಾಣಗಳಲ್ಲಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಜ್ಯದ ಉದ್ಯೋಗ ಮತ್ತು ತರಬೇತಿ ಇಲಾಖೆಯಡಿ 2007–08ನೇ ಸಾಲಿನಲ್ಲಿ ಹೊಸದಾಗಿ ಸ್ಥಾಪಿಸಲ್ಪಟ್ಟಿರುವ 08 ಹಿಂದುಳಿದ ತಾಲ್ಲೂಕುಗಳಲ್ಲಿ ಸ್ಥಾಪಿಸಲಾದ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಕೆಳಕಂಡ 05 ವೃತ್ತಿಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡಲಾಗಿತ್ತು.

| ಕ್ರ.ಸಂ. | ಪ್ರತೀ ಸಂಸ್ಥೆಯಲ್ಲಿ ಪ್ರಾರಂಭಿಸಲಾಗುವ ವೃತ್ತಿಗಳು |
|---|---|
| 1 | ಎಲೆಕ್ಟ್ರೀಷಿಯನ್ |
| 2 | ಎಲೆಕ್ಟ್ರಾನಿಕ್ ಮೆಕಾನಿಕ್ |
| 3 | ಫಿಟ್ಟರ್ |
| 4 | ಟರ್ನರ್ |
| 5 | ಎಂ.ಎಂ.ವಿ. |

ಮೇನೆ (3) ರಲ್ಲಿ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ, ಬೆಂಗಳೂರು ಇವರ ಪತ್ರದಲ್ಲಿ 2007–08 ನೇ ಸಾಲಿನಲ್ಲಿ ರಾಜ್ಯದ ಅತಿ ಹೆಚ್ಚು ಹಿಂದುಳಿದ ತಾಲ್ಲೂಕುಗಳಲ್ಲಿ ಪ್ರಾರಂಭಿಸಲಾದ 8 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ವೃತ್ತಿಗಳನ್ನು ಪ್ರಾರಂಭಿಸಿ ಹೊರಡಿಸಲಾದ ಮೇಲಿನ ಸರ್ಕಾರಿ ಆದೇಶದಲ್ಲಿ 6 ವೃತ್ತಿಗಳ ಬದಲಾಗಿ 5 ವೃತ್ತಿಗಳನ್ನು ಮಾತ್ರ ಅನುಷ್ಠಾನಗೊಳಿಸಲು ಆದೇಶ ಹೊರಡಿಸಲಾಗಿದೆಯೆಂದೂ, ಆದರೆ ಈಗಾಗಲೇ 8 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಸರ್ಕಾರಿ ಆದೇಶ ನಿರೀಕ್ಷಿಸಿ ಎಂ.ಆರ್.ಎ.ಸಿ. ವೃತ್ತಿಗೆ ಪ್ರವೇಶ ಪ್ರಕ್ರಿಯೆ ನಡೆಸಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಿಕೊಂಡು ತರಬೇತಿಗೆ ಬೇಕಾದ ಮೂಲ ಸೌಕರ್ಯಗಳೊಂದಿಗೆ ತರಬೇತಿಯನ್ನು ಪ್ರಾರಂಭಿಸಲಾಗಿದೆಯೆಂದೂ, ಆದುದರಿಂದ ಈ 8 ಸಂಸ್ಥೆಗಳಲ್ಲಿ ಎಂ.ಆರ್.ಎ.ಸಿ. ವೃತ್ತಿಯನ್ನು ಅನುಷ್ಠಾನಗೊಳಿಸಲು ಸೂಕ್ತ ಸರ್ಕಾರಿ ಆದೇಶ ಹೊರಡಿಸುವಂತೆ ಕೋರಿರುವರು.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 78 ಇಟಿಐ 2010, ಬೆಂಗಳೂರು, ದಿನಾಂಕ: 23–07–2010**

ರಾಜ್ಯದಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯಡಿ 2007–08ನೇ ಸಾಲಿನಲ್ಲಿ ಅತೀ ಹಿಂದುಳಿದ ತಾಲ್ಲೂಕುಗಳಲ್ಲಿ ಹೊಸದಾಗಿ ಸ್ಥಾಪಿಸಲಾದ 08 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಾದ ಅಫ್ಜಲ್‌ಪುರ, ಹಿರಿಯೂರು, ಮುಳಬಾಗಿಲು, ದೇವದುರ್ಗ, ನಾಗಮಂಗಲ, ಬೇಲೂರು, ಶ್ರೀರಂಗಪಟ್ಟಣ, ಮತ್ತು ಬಸವಕಲ್ಯಾಣಗಳಲ್ಲಿ ಮಂಜೂರಾತಿ ನೀಡಿರುವ 5 ವೃತ್ತಿಗಳ ಜೊತೆಗೆ ಎಂ.ಆರ್.ಎ.ಸಿ. ವೃತ್ತಿಯನ್ನು ಸಹ ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1930

**ಎ.ಎಸ್. ವಿಶ್ವೇಶ್ವರಯ್ಯ**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ. (ಉದ್ಯೋಗ ಮತ್ತು ತರಬೇತಿ)

## ಸಹಕಾರ ಸಚಿವಾಲಯ

**ವಿಷಯ :** ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಪಾಂಡವಪುರ, ಮಂಡ್ಯ ಜಿಲ್ಲೆ ಇದರ 2001–02 ರಿಂದ 2008–09ನೇ ಸಾಲುಗಳ ವಾರ್ಷಿಕ ಮಹಾ ಸಭೆಯನ್ನು ಮುಂದೂಡಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ : ಡಿಎಸ್‌ಕೆ/ಇಎಸ್‌ಟಿಎಸ್/91/2002–03, ದಿನಾಂಕ 20–10–2009

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 27–11–2009ರ ಪತ್ರದಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಇವರು ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಯ ವ್ಯವಸ್ಥಾಪಕ ನಿರ್ದೇಶಕರು, ಕೋರಿರುವಂತೆ 2001–2002ನೇ ಸಾಲಿನಿಂದ 2007–08ನೇ ಸಾಲುಗಳ ವಾರ್ಷಿಕ ಮಹಾಸಭೆಯನ್ನು ದಿನಾಂಕ 30–09–2009 ರೊಳಗೆ ಕರೆಯಬೇಕಾಗಿದ್ದು, ಹಣದ ಕೊರತೆ, ಸಿಬ್ಬಂದಿ ಕೊರತೆ ಮತ್ತು 2006–07ನೇ ಸಾಲಿನಿಂದ

2008-09ನೇ ಸಾಲುಗಳ ಲೆಕ್ಕಪತ್ರಗಳು ಅಂತಿಮವಾಗಿಲ್ಲದ ಕಾರಣ, ವಾರ್ಷಿಕ ಮಹಾಸಭೆಯನ್ನು ನಡೆಸಲು ಸಾಧ್ಯವಾಗಿರುವುದಿಲ್ಲವಾದ್ದರಿಂದ ಸದರಿ ಸಾಲುಗಳ ವಾರ್ಷಿಕ ಮಹಾಸಭೆಯನ್ನು ದಿನಾಂಕ 30-09-2010 ರೊಳಗೆ ನಡೆಸಲು ಮುಂದೂಡಿ ಕೊಡುವಂತೆ ರಾಜ್ಯ ಸರ್ಕಾರಕ್ಕೆ ಪ್ರಸ್ತಾವವನ್ನು ಸಲ್ಲಿಸುವುದಾಗಿ ದಿನಾಂಕ 21-09-2009 ರಂದು ನಡೆದ ಕಾರ್ಖಾನೆಯ ವಿಶೇಷಾಧಿಕಾರಿಗಳ ಸಭೆಯಲ್ಲಿ ತೀರ್ಮಾನಿಸಿರುವುದಾಗಿ ತಿಳಿಸಿ ಕಾರ್ಖಾನೆಯ ಕೋರಿಕೆಯು ಸಮಂಜಸವಾಗಿರುವುದರಿಂದ, ಒಪ್ಪಬಹುದಾಗಿರುವುದರಿಂದ ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಪಾಂಡವಪುರ, ಮಂಡ್ಯ ಜಿಲ್ಲೆ ಇದರ 2001-2002 ರಿಂದ 2008-09ನೇ ಸಾಲುಗಳ ವಾರ್ಷಿಕ ಮಹಾ ಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 121ರ ಅಡಿಯಲ್ಲಿ ದಿನಾಂಕ 30-09-2010 ರೊಳಗಾಗಿ ಜರುಗಿಸಲು ಸರ್ಕಾರದ ಅನುಮತಿ ನೀಡಬಹುದೆಂದು ಕಬ್ಬು ಅಭಿವೃದ್ಧಿ ಆಯುಕ್ತರು ಅಭಿಪ್ರಾಯಪಟ್ಟಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 01 ಸಸಕಾ 2010, ಬೆಂಗಳೂರು, ದಿನಾಂಕ: 21ನೇ ಜುಲೈ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 121ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿ, ಪಾಂಡವಪುರ, ಮಂಡ್ಯ ಜಿಲ್ಲೆ ಇದರ 2001-2002 ರಿಂದ 2008-09ನೇ ಸಾಲುಗಳ ವಾರ್ಷಿಕ ಮಹಾ ಸಭೆಯನ್ನು ದಿನಾಂಕ 30-09-2010ರೊಳಗೆ ನಡೆಸಲು ಕಾಲಾವಕಾಶವನ್ನು ವಿಸ್ತರಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 27(1)ರ ಉಪಬಂಧಗಳನ್ನು ಮಾರ್ಪಡಿಸಿ ಅನುಮತಿ ನೀಡಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 27(1)ರ ಉಪಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 30-09-2010ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ರ ಕಲಂನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ನಂಜುಂಡಪ್ಪ)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1931 ಸಹಕಾರ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ** : ಶಿವಮೊಗ್ಗ ದೇಶೀಯ ವಿದ್ಯಾಶಾಲೆ ಸಮಿತಿ (ರಿ) ಈ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಕುರಿತು.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ : ಕಂಇ 17 ಮುನೋಸೋ 2006, ದಿನಾಂಕ 24-02-2007

2) ಸಹಕಾರ ಸಂಘಗಳ ನಿಬಂಧಕರು ರವರ ಪತ್ರ ಸಂಖ್ಯೆ : ಆರ್‌ಸಿಎಸ್/ಎಡಿಎಂ/295/ಎಸ್‌ಓಆರ್/2009-10, ದಿನಾಂಕ 06-07-2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 24-02-2007ರ ಆದೇಶದಲ್ಲಿ ದೇಶೀಯ ವಿದ್ಯಾಶಾಲೆ ಸಮಿತಿ (ರಿ), ಶಿವಮೊಗ್ಗ ಈ ಸಂಸ್ಥೆಗೆ ಸಾರ್ವಜನಿಕ ಹಾಗೂ ಮಕ್ಕಳ ಹಿತದೃಷ್ಟಿಯಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27(ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಹಿರಿಯ ಉಪ ವಿಭಾಗಾಧಿಕಾರಿ, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶವನ್ನು ಹೊರಡಿಸಲಾಗಿದೆ. ತದನಂತರ ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸಿ ದಿನಾಂಕ 17-12-2009ರ ಆದೇಶದಲ್ಲಿ ದಿನಾಂಕ 06-12-2009 ರಿಂದ ಜಾರಿಗೆ ಬರುವಂತೆ ಮತ್ತೆ ಆರು ತಿಂಗಳು ಅವಧಿಯವರೆಗೆ ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ 06-07-2010ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರು ದೇಶೀಯ ವಿದ್ಯಾ ಶಾಲಾ ಸಮಿತಿ (ರಿ), ಶಿವಮೊಗ್ಗ ಇದರ ಸಂಸ್ಥೆಯ ಆಡಳಿತಾಧಿಕಾರಿಯವರು ದಿನಾಂಕ 11-05-2010ರ ಪತ್ರದಲ್ಲಿ ವಿವಿಧ ನ್ಯಾಯಾಲಯಗಳಲ್ಲಿ ಇತ್ಯರ್ಥಕ್ಕೆ ಬಾಕಿ ಇದ್ದ ಪ್ರಕರಣಗಳ ತೀರ್ಪಿಗೆ ಕಾಯಬೇಕಾದಂತಹ ಹಾಗೂ ದಿನಾಂಕ 07-03-2010 ರಂದು ನಡೆಸಬೇಕಿದ್ದ ಸಂಸ್ಥೆಯ ಸರ್ವ ಸದಸ್ಯರ ಸಭೆ ಮತ್ತು ಚುನಾವಣೆಯನ್ನು ಅನಿವಾರ್ಯವಾಗಿ ಮುಂದೂಡಬೇಕಾದ ಪ್ರಸಂಗ ಆಡಳಿತಾಧಿಕಾರಿಯವರ ಕೈಮೀರಿದ್ದರಿಂದ, ಅವರ ಪ್ರಾಮಾಣಿಕ ಪ್ರಯತ್ನವು ಫಲಕಾರಿಯಾಗದೆ ಇರುವುದರಿಂದ ಸಂಸ್ಥೆಯ ಆಡಳಿತಾಧಿಕಾರಿಯ ಅವಧಿಯನ್ನು ದಿನಾಂಕ 06-06-2010 ರಿಂದ ಆರು ತಿಂಗಳ ಅವಧಿಗೆ ಕಾಯ್ದೆಯ ಕಲಂ 27ಎ(5) ರೀತ್ಯ ವಿಶೇಷ ಪ್ರಕರಣವೆಂದು ಪರಿಗಣಿಸಿ, ಅಂತಿಮವಾಗಿ ವಿಸ್ತರಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 123 ಸಸಂನೋ 2009, ಬೆಂಗಳೂರು, ದಿನಾಂಕ: 26ನೇ ಜುಲೈ 2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, "ಶಿವಮೊಗ್ಗ ದೇಶೀಯ ವಿದ್ಯಾಶಾಲಾ ಸಮಿತಿ (ರಿ), ಶಿವಮೊಗ್ಗ ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆಡಳಿತಾಧಿಕಾರಿಯಾಗಿ ನೇಮಕವಾಗಿರುವ ಉಪ ವಿಭಾಗಾಧಿಕಾರಿಗಳು, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ಇವರನ್ನು ಅಂತಿಮವಾಗಿ ದಿನಾಂಕ 06-06-2010 ರಿಂದ ಜಾರಿಗೆ ಬರುವಂತೆ ಮತ್ತೆ ಅಂತಿಮವಾಗಿ ಆರು (6) ತಿಂಗಳ ಅವಧಿಗೆ ಆಡಳಿತಾಧಿಕಾರಿಯಾಗಿ ನೇಮಿಸಿ ಅವಧಿ ವಿಸ್ತರಿಸಿ ಆದೇಶಿಸಿದೆ"

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಪಡಿಸಿ, ಕಡ್ಡಾಯವಾಗಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಸಹಾ ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ನಂಜುಂಡಪ್ಪ)**

ಸರ್ಕಾರದ ಅಧೀನ ಕಾರ್ಯದರ್ಶಿ-2

ಪಿ.ಆರ್. 1932

ಸಹಕಾರ ಇಲಾಖೆ

**ಶಿಕ್ಷಣ ಸಚಿವಾಲಯ**

**ವಿಷಯ** : ಸೆಮಿಸ್ಟರ್ ಪದ್ಧತಿಯ ಬದಲಿಗೆ ವಾರ್ಷಿಕ ಪರೀಕ್ಷಾ ಪದ್ಧತಿ ಅಳವಡಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ : ಇಡಿ 24 ಡಿಜಿಓ 2004, ದಿನಾಂಕ 16-02-2004.
2) ಸರ್ಕಾರದ ಆದೇಶ ಸಂಖ್ಯೆ ಇಡಿ 08 ಡಿಜಿಓ 2007, ದಿನಾಂಕ 30-06-2007.
3) ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ದಿನಾಂಕ 05-07-2010ರ ಪ್ರಸ್ತಾವನೆ.

**ಪ್ರಸ್ತಾವನೆ :**

ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿನ ಮಕ್ಕಳ ದೈಹಿಕ ಮಾನಸಿಕ ಹಾಗೂ ಕಲಿಕಾ ಸಾಮರ್ಥ್ಯವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಚಿಂತಿಸಿ, ವಾರ್ಷಿಕ ಪರೀಕ್ಷೆಗಳಿಂದ ಮಕ್ಕಳ ಮೇಲೆ ಹೆಚ್ಚಿನ ಜವಾಬ್ದಾರಿ ಹಾಗೂ ಜ್ಞಾಪಕ ಶಕ್ತಿಯ ಮೇಲೆ ಪರಿಣಾಮ ಬೀರುವುದನ್ನು ಪರಿಶೀಲಿಸಿ, ಮೇಲೆ (1)ರಲ್ಲಿ ಓದಲಾದ ದಿನಾಂಕ 16-02-2004ರ ಆದೇಶದಲ್ಲಿ 2004-05ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ತ್ರೈಮಾಸಿಕ ಪರೀಕ್ಷಾ ಪದ್ಧತಿಯನ್ನು ಜಾರಿಗೆ ತರಲಾಗಿತ್ತು. ತದನಂತರ ಶಿಕ್ಷಣ ಕ್ಷೇತ್ರದ ಮಾನ್ಯ ವಿಧಾನ ಪರಿಷತ್ ಸದಸ್ಯರೊಂದಿಗೆ ಹಾಗೂ ಶಿಕ್ಷಣ ಇಲಾಖೆಯ ಹಿರಿಯ ಅಧಿಕಾರಿಗಳೊಂದಿಗೆ ಚರ್ಚಿಸಿ, ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಿ, ತ್ರೈಮಾಸಿಕ ಪರೀಕ್ಷಾ ಪದ್ಧತಿಯ ಸಾಧಕ-ಬಾಧಕಗಳ ಬಗ್ಗೆ ವರದಿಯನ್ನು ಪಡೆಯಲಾಗಿದೆ. ಈ ವರದಿಯ ಅಭಿಪ್ರಾಯದಂತೆ ಮೇಲೆ(2)ರಲ್ಲಿ ಓದಲಾದ ದಿನಾಂಕ 30-06-2007ರ ಸರ್ಕಾರದ ಆದೇಶದಲ್ಲಿ ತ್ರೈಮಾಸಿಕ ಪರೀಕ್ಷಾ ಪದ್ಧತಿಯನ್ನು ರದ್ದುಪಡಿಸಿ, 5ನೇ ತರಗತಿಯಿಂದ 9ನೇ ತರಗತಿಯವರೆಗೆ ಅರ್ಧವಾರ್ಷಿಕ (ಸೆಮಿಸ್ಟರ್) ಪರೀಕ್ಷಾ ಪದ್ಧತಿಯನ್ನು 2007-08ನೇ ಸಾಲಿನಿಂದ ಜಾರಿಗೆ ತರಲಾಗಿದೆ.

ಪ್ರೌಢಶಾಲಾ ಹಂತದಲ್ಲಿನ ವಿದ್ಯಾರ್ಥಿಗಳಿಗೆ 8 ಮತ್ತು 9ನೇ ತರಗತಿಗಳಲ್ಲಿ ಸೆಮಿಸ್ಟರ್ ಪದ್ಧತಿ ಇದ್ದು, ಈಗಿನ 10ನೇ ತರಗತಿಯ ಪರೀಕ್ಷಾ ಪದ್ಧತಿಗೆ ಪೂರಕವಾಗಿರುವುದಿಲ್ಲ. ಇದರಿಂದ ಬಹುತೇಕ ವಿದ್ಯಾರ್ಥಿಗಳು 10ನೇ ತರಗತಿಯ ವಾರ್ಷಿಕ ಪರೀಕ್ಷೆಯಲ್ಲಿ ನಿರೀಕ್ಷಿತ ಮಟ್ಟದಲ್ಲಿ ಸಾಧನೆಯನ್ನು ಮಾಡದಿರುವುದು ಕಂಡುಬಂದಿರುತ್ತದೆ. ಎಸ್.ಎಸ್.ಎಲ್.ಸಿ. ಪರೀಕ್ಷೆಗಾಗಿ 8ನೇ ತರಗತಿಯಿಂದಲೆ ಮಕ್ಕಳನ್ನು ಸಿದ್ಧಗೊಳಿಸಲು ಅಥವಾ ತರಬೇತುಗೊಳಿಸಲು ಈಗಿನ ಸೆಮಿಸ್ಟರ್ ಪದ್ಧತಿಯ ಬದಲಾಗಿ ವಾರ್ಷಿಕ ಪರೀಕ್ಷಾ ಪದ್ಧತಿಯನ್ನು ಅಳವಡಿಸುವ ಬಗ್ಗೆ ಪಾಲಕರು ಹಾಗೂ ಶಿಕ್ಷಕ ಸಮುದಾಯದಿಂದ ಒತ್ತಾಯ ಕಂಡುಬಂದ ಹಿನ್ನೆಲೆಯಲ್ಲಿ 10ನೇ ತರಗತಿಯಲ್ಲಿ ವಿದ್ಯಾರ್ಥಿಗಳು ವಾರ್ಷಿಕ ಪರೀಕ್ಷೆಯಲ್ಲಿ ಉತ್ತಮ ಸಾಧನೆಯನ್ನು ಮಾಡಲು ಅನುಕೂಲವಾಗುವಂತೆ 8 ಮತ್ತು 9ನೇ ತರಗತಿಗಳಲ್ಲಿಯೂ ಸಹ ವಾರ್ಷಿಕ ಪರೀಕ್ಷೆಯನ್ನು ಜಾರಿಗೆ ತರುವುದು ಅತ್ಯಾವಶ್ಯಕವೆಂದು ಪರಿಗಣಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 124 ಎಸ್‌ಎಲ್‌ಬಿ 2010, ಬೆಂಗಳೂರು, ದಿನಾಂಕ: 17ನೇ ಜುಲೈ, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 8 ಮತ್ತು 9ನೇ ತರಗತಿಗಳಿಗೆ ಸರ್ಕಾರದ ಆದೇಶ ಸಂಖ್ಯೆ ಇಡಿ 08 ಡಿಜಿಓ 2007, ದಿನಾಂಕ 30-06-2007 ರಲ್ಲಿ 2007-08ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ತಂದಿದ್ದ ಅರ್ಧವಾರ್ಷಿಕ (ಸೆಮಿಸ್ಟರ್) ಪರೀಕ್ಷಾ ಪದ್ಧತಿಯ ಬದಲಾಗಿ 2010-11ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ವಾರ್ಷಿಕ ಪರೀಕ್ಷಾ ಪದ್ಧತಿಯನ್ನು ಈ ಕೆಳಕಂಡ ಕಿರು ಪರೀಕ್ಷೆಗಳು ಹಾಗೂ ಪರೀಕ್ಷಾ ವಿಧಾನಗಳೊಂದಿಗೆ ಜಾರಿಗೊಳಿಸಿ ಆದೇಶಿಸಿದೆ.

- ಜುಲೈ ಕೊನೆ ವಾರದಲ್ಲಿ 25 ಅಂಕಗಳಿಗೆ ಒಂದು ಕಿರು ಪರೀಕ್ಷೆ
- ಆಗಸ್ಟ್ ಕೊನೆವಾರದಲ್ಲಿ 25 ಅಂಕಗಳಿಗೆ ಎರಡನೇ ಕಿರು ಪರೀಕ್ಷೆ
- ಅರ್ಧ ವಾರ್ಷಿಕ ಪರೀಕ್ಷೆ 100 ಅಂಕಗಳಿಗೆ ಮಧ್ಯಂತರ ರಜೆಗೆ ಮೊದಲು
- ನವೆಂಬರ್ ಕೊನೆಯ ವಾರದಲ್ಲಿ 25 ಅಂಕಗಳಿಗೆ ಮೂರನೇ ಕಿರು ಪರೀಕ್ಷೆ
- ಜನವರಿ ಮೊದಲ ವಾರದಲ್ಲಿ 25 ಅಂಕಗಳಿಗೆ ನಾಲ್ಕನೇ ಕಿರು ಪರೀಕ್ಷೆ
- ಮಾರ್ಚ್ ತಿಂಗಳಲ್ಲಿ 100 ಅಂಕಗಳಿಗೆ ವಾರ್ಷಿಕ ಪರೀಕ್ಷೆ

ಸೆಮಿಸ್ಟರ್ ಪದ್ಧತಿ ಅಳವಡಿಸುವ ಮೊದಲು ಜಾರಿಯಲ್ಲಿದ್ದ ಇಲಾಖೆಯು ನಿಗದಿಪಡಿಸಿದ ಮೌಲ್ಯ ಮಾಪನ ಹಾಗೂ ತೇರ್ಗಡೆ ನಿಯಮಗಳು ಅನ್ವಯಿಸುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಹೆಚ್. ಟಿ. ಜಯರಾಂ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಪ್ರೌಢ)

ಪಿ.ಆರ್. 1933

## FOREST, ECOLOGY AND ENVIRONMENT SECRETARIAT

**Sub :-** Diversion 0.27 ha. of forest land in Sy. No. 34/2 of Chamundi Betta village, Mysore for construction of Passengers and Tourist Amenity Centre at Chamundi Hills, Mysore in favour of the Divisional Controller, Karnataka State Road Transport Corporation, Urban Division, Mysore.

**Read :-** 1) Letter No. A5(7) GFL.CR.10/2008-09, dated 24-09-2008 of Principal Chief Conservator of Forests, Bangalore
2) State Government letter No. FEE 159 FLL 2008, dated 03-04-2009
3) Letter No. 4-KRB 597/2009-BAN/4888, dated 24-06-2009 of Government of India, Ministry of Environment and Forests, Regional Office, Bangalore.

4) Letter No. A5(7)GFL.CR.10/2008-09, dated 05-03-2010 of Principal Chief Conservator of Forests, Bangalore.
5) State Government letter No. FEE 159 FLL 2008, dated 24-03-2010
6) Letter No. 4-KRB 597/2009-BAN/7557, dated 09-07-2010 of Government of India, Ministry of Environment and Forests, Regional Office, Bangalore.

***

**Preamble:**

The Principal Chief Conservator of Forests, Bangalore vide his letter dated 24-09-2008 read at (1) above has submitted the proposal to obtain the approval of Government of India under Section 2 of Forest (Conservation) Act, 1980 for diversion of 0.27 ha. of forest land in Sy. No. 34/2 of Chamundi Betta village, Mysore for construction of Passengers and Tourist Amenity Centre at Chamundi Hills, Mysore in favour of the Divisional Controller, Karnataka State Road Transport Corporation, Urban Division, Mysore subject to certain conditions.

Accordingly the proposal was recommended to Government of India vide state Government letter dated 03-04-2009 read at (2) above.

The Government of India, Ministry of Environment and Forests, Regional Office, Bangalore vide their letter dated 24-06-2009 read at (3) above has given its approval in principle approval (Stage-I) subject to fulfillment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter dated 05-03-2010 furnished the compliance report read at (4) above and the same has been sent to Government of India vide state Government letter dated 24-03-2010 read at (5) above.

Finally, Government of India Ministry of Environment and Forests, Regional Office, Bangalore vide their letter dated 09-07-2010 read at (6) above has conveyed its final approval (Stage-II) under Section 2 of Forest (Conservation) Act, 1980 for diversion of 0.27 ha. of forest land in Sy No. 34/2 of Chamundi Betta village, Mysore for construction of passengers and tourist amenity centre at Chamundi Hills, Mysore in favour of the divisional controller, Karnataka State Road Transport Corporation, urban division Mysore subject to certain conditions.

The proposal has been examined in detail and hence the order

**Government Order No. FEE 159 FLL 2008, Bangalore, dated 19-07-2010**

In the circumstances explained in the preamble above, Government are pleased to accord sanction under section 2 of Forest (conservation) act, 1980 for diversion of 0.27 ha. of Forest land in sy. No. 34/2, of Chamundi Betta Village, Mysore for construction of Passengers and Tourist Amenity Centre at Chamundi Hills, Mysore in favour of the Divisional Controller, Karnataka State Road Transport Corporation, urban Division, Mysore subject to the following conditions.

1. The permission will come into effect from 09-09-2010 after completion of three months from 09-06-2010 if no civil proceeding are initiated during the intervening period and will be subject to outcome of Court orders with reference to the title of the land if any Civil proceedings are initiated in any Civil Court as per the order dated 09-06-2010 of Hon'ble High Court of Karnataka in W.P. No. 29959 of 2009.
2. The legal Status of the forest land shall remain unchanged
3. The demarcation of the proposed forest area shall be carried out by erecting cement concrete pillars duly numbered at an interval of 20 meters at the cost of user agency.
4. The additional amount of the Net Present Value (NPV) of the diverted forest land if any becoming due after revision of the same by the Hon'ble Supreme Court of India in future, shall be charged by the State Government from the user agency and the same shall be transferred to Ad-hoc CAMPA in account number CA-1582 of Corporation Bank, Block-II, CGO Complex, Phase-I, Lodhi Road, New Delthi110 003.
5. The Karnataka State Road Transport Corporation (KSRTC) shall design the proposed building in such a way that it will not block the view of the gopuram from the entrance of the temple town.
6. The forest land shall be transferred to the user agency only after necessary formalities of settlement of rights under the Scheduled Tribes and other Traditional Forest Dwellers (Recognition of Forest Rights) Act, 2006 are completed.
7. The total forest area utilized for the project shall not exceed 0.27 ha. In case the land is not taken over by the user agency or the same is not used for the stipulated purpose within a period of two years, then the area shall be taken back by the Forest Department.
8. The land shall be utilized only for the purpose for which it is released.
9. If the land is not required for the purpose for which it is granted the same should be resumed back to the Forest Department by the Conservator of Forests under Section 82 of Karnataka Forest Act, 1963.

10. The user agency has to pay the lease rent as fixed by the Government at the time of sanction and any subsequent orders in this regard.
11. The lease is granted for 20 years
12. The Karnataka Forest Act 1963 and Karnataka Forest Rules 1969 will be applicable for any violation
13. If the land is not utilized for the purpose within 2 years, the forest land shall be resumed back by the Conservator of Forests by following the provisions under section 82 of Karnataka Forest Act 1963.
14. Only minimum number of trees shall be cut based on actual requirement of the project.
15. The user agency shall pay the extraction and transportation charges of trees estimated by the Deputy conservator of Forests from the land if extracts.
16. The user agency has to pay the Net Present Value (NPV) as per the Supreme Court Order dated 28-03-2008 and order dated 09-05-2008.
17. The user agency while executing the agreement has to register the Deed with the concerned jurisdictional Sub-registrar as per the prevailing rate of Stamp Duty and Registration fee.
18. The user agency shall abide by all the conditions imposed upon and to be imposed by Government of India. Government of Karnataka and Principal Chief Conservator of Forests.

By Order and in the name of the Governor of Karnataka

**H. M. Mallikarjuna Swamy**
Under Secretary to Government,
Forest, Ecology and Environment Department

P.R. No. 1934

## COMMERCE & INDUSTRIES SECRETARIAT

**Sub :-** Approval to the Project Proposal of M/s. Chitradurga Steel-N-Power Pvt. Ltd., to establish a "Mini Steel Plant consisting of 570 TPD Sponge Iron Plant, Steel Ingots/Billets and Steel Re-rolling with 12 MW Co-generation" at Palavvanahalli village, Imangala Hobli, Hiriyur Taluk, Chitrdurga District.

**Read :-** Proceedings of the 23rd State High Level Clearance Committee (SHLCC) meeting held on 19-06-2010.

***

**Preamble :**

M/s. Chitradurga Steel-N-Power Pvt. Ltd., proposes to establish a "Mini Steel Plant consisting of 570 TPD Sponge Iron Plant, Steel Ingots/Billets and Steel Re-rolling with 12 MW Co-generation" at Palavvanahalli village, Imangala Hobli, Hiriyur Taluk, Chitrdurga District, with an investment of Rs. 144.85 crores, generating employment to about 220 persons in lieu of the SLSWCC approval accorded in its meeting held on 29-08-2009.

In the 23rd State High Level Clearance Committee (SHLCC) meeting held on 19-06-2010 the proposal of the Company has been approved.

Government has examined the recommendations made by the State High Level Clearance Committee in its 23rd meeting held on 19-06-2010 in all aspects.

Hence the following Order.

**Government Order No. CI 393 SPI 2010, Bangalore, dated 14-07-2010**

Government is pleased to accord in principle approval to the project proposal of M/s. Chitradurga Steel-N-Power Pvt. Ltd., to establish a "Mini Steel Plant consisting of 570 TPD Sponge Iron Plant, Steel Ingots/Billets and Steel Re-rolling with 12 MW Co-generation" at Palavvanahalli village, Imangala Hobli, Hiriyur Taluk, Chitrdurga District, with an investment of Rs. 144.85 crores, generating employment to about 220 persons and extend the following infrastructure facilities, incentives and concessions.

**Infrastructure Facilities** :

1. **Land :** 54 acres of land at Sy. Nos. 3,35,36,37,38,39,40,41,42,43,44,57,58 & 59 at Palavvanahalli village, Imangala Hobli, Hiriyur Taluk, Chitradurga District to be purchased U/s 109 of KLR Act and conversion of the same.
2. **Water :** 2380 KLPD from nearest water source, subject to approval of the Water Resources Department.
3. **Power :** 15,000 KVA to be serviced by BESCOM
4. **Incentives and Concessions :** As per prevailing Industrial Policy of the State

**GENERAL TERMS AND CONDITIONS** :

1. **Ore :** The ore based industries to make arrangements on their own for the ore requirement and State Government does not guarantee the ore for these projects.

2. **Environment :** The promoters to obtain CFE and CFO from KSPCB and environmental clearance from MOEF, GOI.
3. **Employment :** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and Commerce for monitoring.
4. **Vendor Development :** Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
5. **Social Infrastructure Development :** The Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
6. **Others :**
   a) The project proponents shall adopt rain water harvesting, waste water recycling and water conservation techniques. Zero discharge facility should be adopted wherever applicable.
   b) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period of two years from the date of issue.

By Order and in the name of the Governor of Karnataka

(**Aparna Pavate)**

P.R. No. 1961

Desk Officer (Technical Cell)

Commerce & Industries Department

## COMMERCE & INDUSTRIES SECRETARIAT

**Sub :-** Approval to the Project Proposal of M/s. Octamec Infrastructure Ltd., to establish an “Aerospace SEZ” at a suitable location in Kolar/Tumkur/Bangalore Rural District.

**Read :-** Proceedings of the 23rd State High Level Clearance Committee (SHLCC) meeting held on 19-06-2010.

***

**Preamble :**

M/s. Octamec Infrastructure Ltd., proposes to establish an “Aerospace SEZ” at a suitable location in Kolar/Tumkur/Bangalore Rural District. with an investment of Rs. 951 crores, generating employment to about 3880 persons.

In the 23rd State High Level Clearance Committee (SHLCC) meeting held on 19-06-2010 the proposal of the Company was discussed and approved.

Government has examined the recommendations made by the State High Level Clearance Committee in the 23rd meeting held on 19-06-2010 in all aspects.

Hence the following Order.

**Government Order No. CI 361 SPI 2010, Bangalore, dated 15-07-2010**

Government is pleased to accord in principle approval to the project proposal of M/s. Octamec Infrastructure Ltd., to establish an “Aerospace SEZ” at a suitable location in Kolar/Tumkur/Bangalore Rural District. with an investment of Rs. 951 crores, generating employment to about 3880 persons and extend the following infrastructure facilities, incentives and concessions.

**Infrastructure Facilities** :

1. **Land :** 252 acres – KIADB to acquire and allot as SUC at a suitable location that the company will identify in Kolar/Tumkur/Bangalore Rural District.
2. **Water :** 2300 KLPD from KIADB
3. **Power :** 20,000 KVA from BESCOM
4. **Incentives and Concessions :** As per applicable SEZ Policy of the State

**GENERAL TERMS AND CONDITIONS** :

1. **Environment :** The promoters to obtain CFE and CFO from KSPCB and environmental clearance from MOEF, GOI.
2. **Employment :** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and Commerce for monitoring.

